Photo by N. Ramakrishna



ಬಹುಮಾನ
ಪಡೆದ ಶೀರ್ಷಿಕೆ

ಕಲಿಯೋಣಾಂದ್ರೆ ಕಲಿಸೋರಾರಿಲ್ಲ

ಕಳಿಸಿದವರು:
ಉಮೇಶ, ದಂಡಾವತಿ ಮಠ

ಬೃಹತ್ ಕರ್ಣಾಟಕದ ಪ್ರಮುಖ ಕೇಂದ್ರಗಳಲ್ಲಿ
ಏಕಕಾಲದಲ್ಲಿ ಅತಿ ಶೀಘ್ರದಲ್ಲಿ ಪ್ರದರ್ಶನ!

ಮುಖ್ಯ ಭೂಮಿಕೆಯಲ್ಲಿ
ಸಿ. ಹೊನ್ನಪ್ಪ
ಭಾಗವತರು
ನಟಿಸಿರುವ



ಲಕ್ಷಾಂತರ ರೂಪಾಯಿಗಳ
ವೆಚ್ಚದಿಂದ ತಯಾರಿಸಿದ
ಭವ್ಯ ದೃಶ್ಯಗಳಿಂದ
ಚಿತ್ತಾಕರ್ಷವಾಗುವ
ನವರಸಭರಿತದಿವ್ಯಕನ್ನಡ
ಕಲಾಕೃತಿ

ಲಲಿತಕಲಾ ಫಿಲ್ಮ್ಸ್‌ರವರ ಪ್ರಥಮ ಕಾಣಿಕೆ

# ಮಹಾಕವಿ ಕಾಳಿದಾಸ

ನಿರ್ದೇಶನ: ಕೆ. ಆರ್. ಸೀತಾರಾಮಶಾಸ್ತ್ರಿ
ಸ್ಟೂಡಿಯೋ: ವಾಹಿನಿ
ಸಾಹಿತ್ಯ: ಆಸ್ಥಾನ ವಿದ್ವಾನ್ ಬೆಳ್ಳಾವೆ ನರಹರಿಶಾಸ್ತ್ರಿ, ಕೆ. ಆರ್. ಸೀತಾರಾಮಶಾಸ್ತ್ರಿ

ಭೂಮಿಕೆ:
ಬಿ. ರಾಘವೇಂದ್ರರಾವ್ ★ ಈಶ್ವರಪ್ಪ ★ ಜಿ. ವಿ. ಅಯ್ಯರ್ ★ ನರಸಿಂಹರಾಜು
ಸಂಬಂದಮೂರ್ತಿ ಭಾಗವತರು ★ ಮರಿರಾವ್ ★ ಗಣಪತಿಭಟ್
ಬಿ. ಸರೋಜದೇವಿ ★ ರಾಜಸುಲೋಚನ ★ ಮಿತ್ರವಿಂದ

ಛಾಯಾ
ಎ. ಎನ್. ಪರಮೇಶ್

ಕಲಾ
ಎಸ್. ಎಸ್. ಕುಕ್ಕೆ

ಸಂಗೀತ
ಸಿ. ಹೆಚ್. ಭಾಗವತರು

ನೃತ್ಯ
ಸೋಹನ್‌ಲಾಲ್

ಮುಂಬಯಿ ಪ್ರಾಂತ್ಯಕ್ಕೆ
ಶ್ರೀನಿವಾಸ ಪಿಕ್ಚರ್ಸ್
ಗದಗ.




ಮೈಸೂರು, ಹೈದರಾಬಾದ್
ಪ್ರಾಂತ್ಯಕ್ಕೆ
ಕರ್ಣಾಟಕ ಫಿಲ್ಮ್ಸ್ ಲಿ.,
ಗಾಂಧಿನಗರ, ಬೆಂಗಳೂರು-2.

ವಿವರಗಳಿಗೆ: ಲಲಿತಕಲಾ ಫಿಲ್ಮ್ಸ್ ಲಿಮಿಟೆಡ್
22 ಆರ್ಕಾಟ್ ಮೊದಲಿಯಾರ್ ಬೀದಿ :: ಮದರಾಸ್ – 17.

KATAKA








ಮೈಸೂರು, ತಮಿಳುನಾಡು: ರಾಜ್‌ಶ್ರೀ ರಿಲೀಜ್. ಆಂಧ್ರ, ಸೀಡೆಡ್, ನೈಜಾಂ: ಚಮ್ರಿಯಾ ರಿಲೀಜ್.
ಬೊಂಬಾಯಿ: ಶ್ರೀನಿವಾಸ ರಿಲೀಜ್.







60 ವರ್ಷಗಳಿಗಿಂತಲೂ ಹೆಚ್ಚು ಕಾಲದಿಂದ ಅಸಂಖ್ಯಾತ ಡಾಕ್ಟರರು ಪರ್ಟುಸಿನ್ ಟೆಷ್ನರ್, ಇದರ ಸಹಾಯದಿಂದ ಯಶಸ್ವಿಯಾಗಿ ಚಿಕಿತ್ಸೆಗೈಯುತ್ತಾ ಬಂದಿರುವರು. ಇದು ಕೆಮ್ಮು, ಗಂಟಲು ನೋವು, ಬ್ರೋಂಕೈಟಿಸ್, ಗೂರುಬ್ಬಸ, ಮತ್ತು ನಾಯಿಕೆಮ್ಮು ಮುಂತಾದ ವ್ಯಾಧಿಗಳನ್ನೆಲ್ಲಾ ಅನಾಯಾಸವಾಗಿ ಪರಿಹರಿಸುತ್ತದೆ. ಶೀಘ್ರವಾದ ಮತ್ತು ಸುರಕ್ಷಿತವಾದ ನಿವಾರಣೆಗೆ ಪರ್ಟುಸಿನ್ ಸೇವಿಸಿರಿ. ಇದು ಸೇವಿಸಲು ಬಹು ಮಧುರವಾಗಿದೆ. ಇಂದೇ ಪರ್ಟುಸಿನ್ ಪಡೆಯಿರಿ.

ಎಲ್ಲಾ ಕೆಮಿಸ್ಟ್ ಅಂಗಡಿಗಳಲ್ಲಿಯೂ ದೊರೆಯುವುದು.

ಇಟೆಫಾ ಲಿಮಿಟೆಡ್, ಫಾನ್, ಲೀಶಿನ್‌ಸ್ಟೀನ್, ಸ್ವಿಸ್ ಕಸ್ಟಮ್ಸ್ ಮತ್ತು ಎಕನಾಮಿಕ್ ಟೆರಿಟೊರಿ, ಇವರ ಏರ್ಪಾಡಿನಿಂದ ಇನ್ಫಾ ಲಿಮಿಟೆಡ್, ಪೋಸ್ಟ್ ಬಾಕ್ಸ್ 1041, ಮುಂಬಯಿ - 1 ಇವರು ಭಾರತದಲ್ಲಿ ತಯಾರಿಸುತ್ತಿರುವರು.

3 - 1 - 1955 ರಿಂದ

# ಪ್ರಸಾದ್ ಪ್ರೋಸೆಸ್

(ಪ್ರೈವೇಟ್ ಲಿಮಿಟೆಡ್) ಜಾಯಿಂಟ್ ಸ್ಟಾಕ್ ಕಂಪೆನಿಯಾಗಿ ರಿಜಿಸ್ಟರು ಮಾಡಲಾಯಿತೆಂದು ತಿಳಿಸಲು ಸಂತೋಷಿಸುತ್ತೇವೆ



ಪೋಸ್ಟರು, ಕ್ಯಾಲೆಂಡರು ಪ್ರಿಂಟಿಂಗಿಗಾಗಲಿ, ಪ್ರೋಸೆಸ್ ಬ್ಲಾಕುಗಳ ತಯಾರಿಕೆಗಾಗಲಿ, ಸಂಬಂಧಪಟ್ಟ ಪತ್ರವ್ಯವಹಾರಗಳು, ಚೆಕ್ಕುಗಳು, ಮನಿಯಾರ್ಡರುಗಳು ಮೊದಲಾದುವುಗಳನ್ನು ಇನ್ನುಮೇಲೆ ಕೆಳಗೆ ಕಂಡ ವಿಳಾಸಕ್ಕೆ ಕಳುಹಿಸಿ ಕೊಡಬೇಕಾಗಿ ವಿನಂತಿ.

ಪ್ರಸಾದ್ ಪ್ರೋಸೆಸ್ ಲಿಮಿಟೆಡ್,

ಚಂದಮಾಮ ಬಿಲ್ಡಿಂಗ್ಸ್ :: ಮದರಾಸು - 26.

ಬಿ. ಎಲ್. ಎನ್. ಪ್ರಸಾದ್

ಮೇನೇಜಿಂಗ್ ಡೈರೆಕ್ಟರು.



## ಈ ಸಂಚಿಕೆಯಲ್ಲಿ



ಅಲ್ಲದೆ ಇತರ ಚಂದ್ರರು, ಫೋಟೋ ಶೀರ್ಷಿಕೆಯ ಸ್ಪರ್ಧೆ,
ವಾರ್ತೆಗಳು — ವಿಶೇಷಗಳು, ಚಿತ್ರಕಥೆ ಎಲ್ಲಾ ಇವೆ.

# ಚಂದಮಾಮ

ಸಂಚಾಲಕರು: 'ಚಕ್ರಪಾಣಿ'

---

ನಮ್ಮನ್ನು ಯಾರಾದರೂ ನಿಂದಿಸಿದರೆ 'ನಾವು ಮಾಡಿದ ತಪ್ಪು ಏನು' ಎಂದು ಯೋಚನೆ ಮಾಡಿ ನೋಡಬೇಕು; ಆಗ ನಿಂದಿಸಿದವನಮೇಲೆ ಸಿಟ್ಟುಮಾಡಬೇಕೋ ಬೇಡವೋ ಗೊತ್ತಾಗುತ್ತದೆ. ನಮ್ಮ ಕರ್ತವ್ಯವನ್ನು ಪೂರ್ಣಮಾಡದೆ ನಮ್ಮವನೇ ಎಂಬ ಪ್ರೀತಿಯಿಂದ ಅವನ ಮೇಲೆ ಭಾರಹಾಕಿ ತಾನು ನಿಶ್ಚಿಂತನಾಗುವುದು ತಪ್ಪು. ಮತ್ತು ಗುಣವು ಎಲ್ಲಿದ್ದರೂ ಗೌರವಿಸಲ್ಪಡಬೇಕಾದುದೇ. ಕೆಟ್ಟತನದ ಜ್ಞಾನವಿಲ್ಲದೆ ಕೆಟ್ಟವರನ್ನು ಗೆಲ್ಲಲು ಸಾಧ್ಯವಿಲ್ಲ. ನಮ್ಮಿಂದಾಗದುದನ್ನು ಇನ್ನೊಬ್ಬರು ಮಾಡಿದರೆ ನಾವು ಒಳ್ಳೆಯ ಹೃದಯಿಗಳಾದರೆ ಮೆಚ್ಚುತ್ತೇವೆ; ಕೆಟ್ಟಹೃದಯಿಗಳಾದರೆ ಅಸೂಯೆ ಪಡುತ್ತೇವೆ. ಇಂತಹ ಬೇರೆಬೇರೆ ಬಗೆಯ ನೀತಿಗಳು ಚಂದಮಾಮನ ಬೇರೆ ಬೇರೆ ಕಥೆಗಳಲ್ಲಿ ಅಡಗಿವೆ. ಓದುತ್ತಾ ಅವುಗಳನ್ನು ಕಂಡು ಹಿಡಿಯುವಿರಿತಾನೆ? ಸಂತೋಷ.


ಫಿಬ್ರವರಿ ೧೯೫೫

ಸಂಪುಟ ೧೪

ಸಂಚಿಕೆ ೨




# ಗಿಳಿಯ ಗೆಲುಮೆ

ಚಂಡಪುರಿಯೆಂಬೂರಿನೊಳಗೆ
ಗುಂಡಭೀಮೋದ್ದಂಡ ನೆಂಬವ
ಸಾವಿರಾನೆಯು ಶಕ್ತನೆಂದು ಯ
ಶೋ ವಿಲಾಸದಿ ಮೆರೆಯುತಿದ್ದನು.

ವೀರ ಬಂಟರು ಹಿಂದೆ ನಡೆತರೆ,
ಊರ ಸುತ್ತುತ ವಿಾಸೆ ತಿರುಗಿಸಿ
'ನೂರು ಸಿಂಗಗ ಳೊಂದೆಬಾರಿಗೆ
ಹೋರಿ ಹಿಡಿವೆನು ಪ್ರಾಣದೊಂದಿಗೆ'

ಎಂದು ತಾನೇ ಗುಡುಗಿಕೊಳ್ಳುತ
ಮುಂದೆ ನಡೆದನು ನೆಲವ ನೋಡದೆ.






'ಬಂಟ ಭೀಮನೆ! ಅಷ್ಟು ಬಲ ನಿನ
ಗುಂಟೆ? ಹಿಡಿ ನೋಳ್ಪಿನ್ನ ನೀಗಳೆ!
ಕೈಯ ಬೆರಳಿನ ಎನ್ನ ಹಿಡಿಯಲು
ಕೈಯಲಾಗದ ಬಂಟ ನಂತಿವ!'
ಎಂದು ಗಲಗಲ ನಕ್ಕ ಚೆಲುವಿನ
ದೊಂದು ಗಿಳಿಯನು ಕಂಡು ಉರಿದನು.
ಅಂದದಾ ಗಿಳಿಯಂದ ಮಾತಿಗೆ
ಮಂದಿ 'ಭಲೆ ಭಲೆ' ಎಂದು ನಕ್ಕರು;
'ಹಾರುವಾ ಗಿಳಿ! ಪೋರ! ಸುಂದರ!
ವಾರೆವಾ!' ಎಂದುಲಿಯಲಾ ಜನ,
ಮತ್ತು ಮತ್ತಾ ಶುಕವು ಭೀಮನ
ಸುತ್ತಿ ನಗುತಲೆ ಗೇಲಿಮಾಡಲು,
ಕಂಡು ಭೀಮನು ಕೋಪದಿಂದು—
ದ್ದಂಡನಾಗುತೆ, ಮುಷ್ಟಿ ಬಿಗಿಯುತೆ





"ಮಾರಂಗ"

ಹೀನವಿದು, ಗಿಳಿ ಪಾಪ! ಬಿಡಿ ಬಿಡಿ!
ಏನು ಪೌರುಷ!' ವೆನಲು ಭೀಮನು
ಬಿಗಿದ ಕೈ ಸಡಿಲಾಗಿ ಬಿಟ್ಟನು!
ನಗುತೆ ಗಲಗಲ, ಹಾರಿ ಗಗನದಿ
ಮಗುಳೆಯಾ ಗಿಳಿಯೆಂದಿ 'ತೋವೊ!
ಗೆದ್ದೆ ನಾ ನೀ ಸೋತೆ, ಹೌದೋ!'
ಮುದ್ದು ಹಕ್ಕಿಯ ಮುದ್ದುಮಾತಿಗೆ
ಇದ್ದವರು ನಗುತಿರಲು, ಭೀಮನು
ಸದ್ದುಮಾಡದೆ ಮುಗುಳು ನಕ್ಕನು!
ಬುದ್ಧಿ ಕಲಿತನು, ಮುಂದೆ ನಡೆದನು.

ಹಳ್ಳ ತಿಟ್ಟಾ, ಗುಡ್ಡ ಬೆಟ್ಟಾ
ಎಲ್ಲ ಎಗರಾ ಗಿಳಿಯ ಹಿಡಿದನು.
'ಅಂದದಿಂದಿಹ ಪೊಗರೆ? ಜಜ್ಜಿಯೆ
ಕೊಂದುಹಾಕುವೆ' ನೆಂದು ಮೇಲಕೆ
ಎತ್ತಲವನಾ ಶುಕವು ಬೆದರದೆ
ಮತ್ತು ನಗುತಲೆ ಎಂದಿ 'ತರರೇ!
ಭಳಿರೆ! ಭಳಿರೇ! ಕಾಣಿರೆಲ್ಲಾ!
ಗಿಳಿಯ ಹಿಡಿದೀ ಸಾಸಿರಾನೆಯ
ಬಲದ ಭೀಮನ, ಗುಬ್ಬಿಯನು ಕೊ—
ಲ್ಲಲಿಕೆ ಬ್ರಹ್ಮಾಸ್ತ್ರವನೆ ತೊಡುವನು!
ನೂರು ಸಿಂಗಗಳನ್ನು ಹಿಡಿಯುವ
ವೀರ, ಗಿಳಿಯನು ಜಜ್ಜಿ ಕೊಲುವನು!
ಕಾಣಿರೋ ಈ ಮಹಾವೀರನ!'
ಈ ನುಡಿಗೆ ಜನರೆಲ್ಲ 'ಛೀ ಛೀ!



# ಮುಖ ಚಿತ್ರ

ಸೌಗಂಧಿಕಾ ಪುಷ್ಪಕ್ಕಾಗಿ ಈಶಾನ್ಯದಿಕ್ಕಿಗೆ ಹೊರಟ ಭೀಮಸೇನನು, ದಾರಿಯಲ್ಲಿ ಅಡ್ಡವಾದ ಕಾಡುಮರಗಳನ್ನು ದೂಡಿ ಬೀಳಿಸುತ್ತ ಮುಂದೆ ಮುಂದೆ ಸಾಗಿದನು. ಕಾಡನ್ನು ಕಳೆದು ಗಂಧಮಾದನ ಪರ್ವತದ ಬಳಿಯಲ್ಲಿರುವ ದೊಡ್ಡದೊಂದು ಬಾಳೆ ಯವನಕ್ಕೆ ಪ್ರವೇಶಿಸಿದನು. ಅಲ್ಲಿ ದಾರಿಗೆ ಅಡ್ಡವಾಗಿ ಕುಳಿತಿದ್ದ ಮುದಿಕೋತಿಯನ್ನು ಕಂಡು—" ಹೇ, ಮುದಿಮೃಗವೇ, ದಾರಿ ಬಿಡು " ಎಂದು ಗರ್ಜಿಸಿದನು.

" ನಾನು ತೀರ ಮುದುಕನಯ್ಯಾ, ಏಳಲಾರೆ. ನೀನೇ ನನ್ನ ಬಾಲವನ್ನೆತ್ತಿ ಆಚೆಗೆ ಸರಿಸಿ ಮುಂದೆ ಹೋಗು " ಎಂದನು ಆ ಮುದಿವಾನರ.

ಭೀಮನು ಅಲಕ್ಷ್ಯವಾಗಿ ಮೊದಲು ಎಡಗೈಯಿಂದ ಬಾಲವನ್ನು ಆಚೆಗೆ ದೂಡಲು ನೋಡಿದನು. ನಂತರ ಬಲಗೈಯನ್ನೂ ಸೇರಿಸಿ, ತನ್ನ ಎಲ್ಲಾ ಶಕ್ತಿ ಯನ್ನೂ ಪ್ರಯೋಗಿಸಿದನು. ಆ ಬಾಲವನ್ನು ಕದಲಿಸಲಿಕ್ಕಾದರೂ ಭೀಮನಿಂದಾಗ ಲಿಲ್ಲ. ಕೂಡಲೇ ಭೀಮನು ಬಹಳ ಗೌರವದಿಂದ ಆ ವಾನರನನ್ನು ವಂದಿಸಿ " ನಿಮ್ಮನ್ನು ಕ್ಷುದ್ರವಾಗಿ ತಿಳಿದು ಮಾತಾಡಿದ್ದಕ್ಕೆ ಮನ್ನಿಸಿ. ನೀವು ಯಾರೋ ಮಹಾತ್ಮರು. ನನ್ನನ್ನು ಅನುಗ್ರಹಿಸಬೇಕು" ಎಂದು ಬೇಡಿಕೊಂಡ. ಆಗ ವಾನರನು ಮುಗುಳು ನಗುತ್ತ " ತಮ್ಮಾ, ನಾನು ವಾಯುಪುತ್ರನಾದ ಹನುಮಂತ. ನಿನಗೆ ಅಣ್ಣ. ಇದೋ ನೋಡು ನನ್ನ ವಿಶ್ವರೂಪ " ಎಂದು ಭೂಮ್ಯಾಕಾಶಗಳನ್ನು ಒಂದಾ ಗಿಸುವಂತೆ ವಿಶ್ವರೂಪ ದರ್ಶನಮಾಡಿದನು.

ಭೀಮಸೇನನು ಹನುಮಂತನನ್ನು ತುಂಬಾ ಸ್ತುತಿಸಿದಾಗ ಹನುಮಂತನು ಮೆಚ್ಚಿದನು. ಮತ್ತು ಪಾಂಡವರ ಭವಿಷ್ಯವನ್ನು ಹೇಳಿ, " ಮುಂದೆ ಕೌರವ ಪಾಂಡವರ ಯುದ್ಧವಾಗುವಾಗ, ನಾನು ಅರ್ಜುನನ ಧ್ವಜದಲ್ಲಿದ್ದು ನಿಮಗೆಲ್ಲಾ ಬಲವರ್ಧನೆ ಮಾಡುವೆನು " ಎಂದು ವರವಿತ್ತನು.

ಭೀಮಸೇನನು ಸಂತೃಪ್ತನಾಗಿ ಹನುಮಂತನು ತೋರಿಸಿದ ದಾರಿಯಿಂದ ಮುಂದೆಸಾಗಿ ಸೌಗಂಧಿಕಾವನವನ್ನು ಮುಟ್ಟಿದನು. ಕುಬೇರನ ಕಾವಲುಗಾರರಾದ ರಾಕ್ಷಸರು ಭೀಮಸೇನನನ್ನು ತಡೆದರು. ಭೀಮನು ಅವರನ್ನು ಮೀರಿ ಮುಂದೆ ನಡೆದಾಗ ದೊಡ್ಡ ಕಾಳಗವಾಯಿತು. ರಾಕ್ಷಸರನ್ನೆಲ್ಲಾ ಸೋಲಿಸಿ ಯಥೇಷ್ಟವಾಗಿ ಸೌಗಂಧಿಕಾ ಪುಷ್ಪಗಳನ್ನು ಕೊಯ್ದುಕೊಂಡು ಹಿಂದಿರುಗಿದನು ಭೀಮಸೇನ. ದ್ರೌಪದಿಗೆ ಪರಮ ಸಂತೋಷವಾಯಿತು. ಎಲ್ಲಕ್ಕೂ ಮಿಗಿಲಾಗಿ ಹನುಮಾನ್ ಯೋಗದಿಂದ ಧರ್ಮರಾಯಾದಿಗಳು ಸಂತುಷ್ಟರಾದರು.




# ಪದ್ಮಾವತಿಯ ಪರಿಣಯ

ಪಾಂಡವರ ಸಂತತಿಗೆ ಸೇರಿದ ವತ್ಸದೇಶದ ಅರಸು ಉದಯನನು ಮಂತ್ರಿ ಯೌಗಂಧ ರಾಯಣನ ಸಹಾಯದಿಂದ ಉಜ್ಜಯಿನಿಯ ರಾಜಕುಮಾರಿ ವಾಸವದತ್ತಾದೇವಿಯನ್ನು ಮದುವೆಯಾದನು. ವತ್ಸರಾಜನಿಗೆ ರಾಜ ಕಾರ್ಯದಲ್ಲಿ ಆಸಕ್ತಿಯಿರಲಿಲ್ಲ; ಸಂಗೀತ ಮತ್ತು ಬೇಟೆಯಾಡುವುದರಲ್ಲಿ ಆಸಕ್ತಿ ಹೆಚ್ಚು. ಈಗ ವಾಸವದತ್ತಾದೇವಿ ಆತನ ಮನವನ್ನು ಸಂಪೂರ್ಣವಾಗಿ ಆಕರ್ಷಿಸಿದಳು. ರಾಜನು ರಾಜ್ಯಾಡಳಿತವನ್ನೆಲ್ಲಾ ಮಂತ್ರಿ ಯೌಗಂಧರಾಯಣನ ಮೇಲೂ ಸೇನಾಧಿಪತಿ ರುಮುಣ್ವಂತನಮೇಲೂ ಹೊರಿಸಿ ಸದಾ ವಾಸ ವದತ್ತಾದೇವಿಯ ಸಂಗಡವೂ ಬೇಟೆ ಮತ್ತು ಇತರ ವಿಲಾಸಗಳಲ್ಲಿಯೂ ತಲ್ಲೀನನಾದನು.

ಹಿಂದೆ ಚಂದ್ರವಂಶದ ರಾಜರು ಹಸ್ತಿನಾ ಪುರವನ್ನು ರಾಜಧಾನಿಯನ್ನಾಗಿ ಮಾಡಿ ಕೊಂಡು ಭಾರತದೇಶವನ್ನೆಲ್ಲಾ ಆಳಿದರು. ಆದರೆ ಉದಯನನು ರಾಜ್ಯಭಾರಕ್ಕೆ ಬರುವ ಸಮಯಕ್ಕೆ ಸಾಮ್ರಾಜ್ಯವೆಲ್ಲಾ ಕೈಬಿಟ್ಟು ಹೋಗಿ ವತ್ಸದೇಶಮಾತ್ರ ಉಳಿದಿತ್ತು. ರಾಜ ನನ್ನು ಭೋಗಲಾಲಸೆಗಳಿಂದ ತಪ್ಪಿಸದಿದ್ದರೆ ಈಗಿರುವ ರಾಜ್ಯವೂ ಪರರ ಪಾಲಾಗುವು ದೆಂದು ಯೌಗಂಧರಾಯಣನು ಭೀತ ನಾದನು. ಆತನು ಒಂದು ದಿನ ರಾತ್ರಿ ರುಮುಣ್ವಂತನನ್ನು ತನ್ನ ಮನೆಗೆ ಕರೆಸಿ, ಮಾಡಬೇಕಾದ ಕರ್ತವ್ಯವನ್ನು ಕುರಿತು ಸಮಾಲೋಚನೆ ನಡೆಸಿದನು.

ಯೌಗಂಧರಾಯಣ ಈ ಮೊದಲೇ ಒಂದು ಆಲೋಚನೆ ಮಾಡಿದ್ದನು. ಅದೇನೆಂದರೆ ಉದ ಯನನ ಶತ್ರುವರ್ಗಕ್ಕೆ ಸೇರಿದವರಲ್ಲಿ ಮಗಧ ರಾಜನಾದ ಪ್ರದ್ಯೋತನು ಪ್ರಬಲನು. ಮಗಧ ರಾಜ್ಯವು ವತ್ಸರಾಜ್ಯಕ್ಕೆ ನೆರೆಯಲ್ಲಿದ್ದ ದೇಶ. ಪ್ರದ್ಯೋತನನ್ನು ಯಾವ ರೀತಿಯಿಂದಲಾ ದರೂ ತಮ್ಮ ಕಡೆಗೆ ಒಲಿಸಿಕೊಂಡರೆ ಉದ ಯನನು ಸಾಮ್ರಾಜ್ಯವನ್ನು ವಿಸ್ತರಿಸಲು ಸಾಧ್ಯವಾಗುವುದು. ಪ್ರದ್ಯೋತನಿಗೆ ಪದ್ಮಾ ವತಿ ಎಂಬ ಮಗಳಿದ್ದಳು. ಆಕೆ ಅಪೂರ್ವ ಸುಂದರಿ. ಸಾಧು ಸ್ವಭಾವದವಳು. ಉದಯ

ಪಿ. ಡಿ. ರಾವ್



ನನಿಗೆ ಆಕೆಯೊಂದಿಗೆ ವಿವಾಹ ಮಾಡಿಸಿದರೆ ತಮ್ಮ ಕೆಲಸ ಸುಲಭವೆಂದು ಯೌಗಂಧರಾಯಣನು ಎಣಿಸಿದ್ದ.

'ನಿಮ್ಮ ರಾಜಕುಮಾರಿಯನ್ನು ನಮ್ಮ ಅರಸರಿಗೆ ಕೊಟ್ಟು ವಿವಾಹಮಾಡಿ' ಎಂದು ಯೌಗಂಧರಾಯಣನು ಮಗಧಾಧಿಪತಿಗೆ ಹೇಳಿಕಳುಹಿಸಿದ್ದ. 'ವಾಸವದತ್ತಾದೇವಿಯ ಹೊರತಾಗಿ ಬೇರೇನೂ ಯೋಚನೆ ಇಲ್ಲದ ಉದಯನನಿಗೆ ನನ್ನ ಮಗಳನ್ನು ಕೊಟ್ಟು ವಿವಾಹ ಮಾಡುವುದೆಂತು?' ಎಂದು ಆತನು ಪ್ರತಿಯಾಗಿ ಪ್ರಶ್ನೆಹಾಕಿದ. ವಾಸವದತ್ತ ಹತ್ತಿರವಿರುವಾಗ ಉದಯನನು ಬೇರೆ ಒಬ್ಬಳನ್ನು ವಿವಾಹವಾಗುವುದು ಸಾಧ್ಯವಿರಲಿಲ್ಲ. ಅದಕ್ಕಾಗಿ ಉದಯನನಿಂದ ವಾಸವದತ್ತಳನ್ನು ಅಗಲಿಸಬೇಕು. ಅದಕ್ಕೊಂದು ಉಪಾಯ ಯೋಚಿಸಿದ್ದ ಯೌಗಂಧರಾಯಣ. ರಾಜನು ಎಲ್ಲೋ ದೂರ ಪ್ರದೇಶದಲ್ಲಿರುವಾಗ ವಾಸವದತ್ತ ತೀರಿಕೊಂಡಳೆಂಬ ಸುದ್ದಿ ಹರಡಿಸಿ, ಉದಯನನನ್ನು ಪದ್ಮಾವತಿಯೊಂದಿಗೆ ವಿವಾಹವಾಗಲು ಒಪ್ಪಿಸಬೇಕು. ವಿವಾಹ ಮುಗಿಯುವ ವರೆವಿಗೂ ವಾಸವದತ್ತಳನ್ನು ಎಲ್ಲಿಯಾದರೂ ಮರೆಮಾಡಿಡಬೇಕು. ಈ ಬಗೆಯಲ್ಲಿರುವ ಉಪಾಯವನ್ನು ಕೇಳಿ ರುಮಣ್ವಂತನು ಬೆರಗಾದನು.

"ವಾಸವದತ್ತ ಮರಣಹೊಂದಿದಳೆಂದರೆ ಉದಯನನು ಮತಿಭ್ರಮಣೆ ಹೊಂದಬಹುದು. ತಾನೆ ಮರಣಹೊಂದಲೂ ಬಹುದು. ಅಷ್ಟೇ ಅಲ್ಲ. ಈ ಆಲೋಚನೆಗೆ ವಾಸವದತ್ತಾ ದೇವಿಸಹ ಅಂಗೀಕರಿಸಬೇಕು. ಆಕೆಯ ಸಹೋದರನಾದ ಗೋಪಾಲಕನಿಗೆ ನಿಜವನ್ನು ತಿಳಿಸಿಡುವುದು ಒಳ್ಳೆಯದು" ಎಂದು ಸಲಹೆ ಕೊಟ್ಟ ರುಮಣ್ವಂತ.

ಯಾರಿಗೂ, ಯಾವ ಆಪತ್ತೂ ಉಂಟಾಗದಂತೆ ಈ ನಾಟಕವನ್ನು ಪೂರ್ತಿಗೊಳಿಸುವೆನೆಂದು ಯೌಗಂಧರಾಯಣನು ಕೆಲಸಕ್ಕೆ ಕೈಹಾಕಿದ. ಗೋಪಾಲಕನನ್ನು ಬರಮಾಡಿಕೊಂಡು ಆತನಿಗೆ ರಹಸ್ಯವಾಗಿ ಈ ವಿಷಯವನ್ನೆಲ್ಲಾ ತಿಳಿಸಿದ. ಮಾರನೇಯ ದಿನ ಯೌಗಂಧರಾಯಣನು ಉಡಯನನ ಹತ್ತಿರ ಹೋಗಿ 'ಪ್ರಭೂ, ನಾವು ಲಾವಣಕ್ಕೆ ಹೋಗೋಣ. ಅದು ನಮ್ಮ ರಾಜ್ಯದ ನಡು



ಪ್ರದೇಶದಲ್ಲಿದೆ. ಬಹಳ ರಮಣೀಯವಾದ ಪ್ರದೇಶ. ಬೇಟೆಯಾಡಲು ಪ್ರಶಸ್ತವಾದ ಸ್ಥಳ. ಅದಷ್ಟೇ ಅಲ್ಲ; ಅಲ್ಲಿನ ಪ್ರಜೆಗಳನ್ನು ಮಗಧರಾಜನು ತೊಂದರೆಪಡಿಸುತ್ತಿರುವ ನಂತೆ. ಅಲ್ಲಿಗೆ ಹೋಗಿ ಜನರ ಸುಖದುಃಖ ಗಳನ್ನು ವಿಚಾರಿಸುವುದು ನಮ್ಮ ಕರ್ತವ್ಯ' ಎಂದ. ಉದಯನನು ಒಪ್ಪಿ ವಾಸವದತ್ತಾ, ಗೋಪಾಲಕ ಮತ್ತು ತನ್ನಿತರ ಪರಿವಾರ ದೊಂದಿಗೆ ಲಾವಣಕ್ಕೆ ಪ್ರಯಾಣಬೆಳೆಸಿದ. ಯೌಗಂಧರಾಯಣ, ವಸಂತಕ ಮುಂತಾದ ವರೂ ಸಹ ಅವರೊಂದಿಗೆ ಹೊರಟರು. ಅಲ್ಲಿಗೆ ಹೋದಂದಿನಿಂದ ಉದಯನನು ಬೇಟೆಯ ಹುಚ್ಚಿನಲ್ಲೇ ತಲ್ಲೀನನಾದನು.

ಒಂದು ದಿನ ಉದಯನನು ಬೇಟೆ ಯಾಡಲು ಬಹಳದೂರ ಹೋದುದನ್ನು ಕಂಡು, ಯೌಗಂಧರಾಯಣನು ವಾಸವ ದತ್ತಾ ದೇವಿಯ ಬಳಿಸಾರಿ ತನ್ನ ಹಂಚಿಕೆ ಯನ್ನು ಆಕೆಗೆ ತಿಳಿಸಿದ. ತಾನು ತೀರಿಹೋ ದಂತೆ ನಟಿಸಿ ರಾಜನಿಗೆ ಬಾಧೆ ಯುಂಟು ಮಾಡುವುದು, ಕೆಲವುಕಾಲ ವಿರಹಬಾಧೆ ಯನ್ನು ಅನುಭವಿಸುವುದು ವಾಸವದತ್ತಳಿಗೆ ದುರ್ಭರವಾಗಿ ತೋರಿತು. ಆದರೂ ಯೌಗಂಧರಾಯಣನ ಮೇಲಿದ್ದ ಗುರುಭಾವ ದಿಂದಲೂ, ತನ್ನ ಪತಿಗೆ ಸಾಮ್ರಾಜ್ಯಪ್ರಾಪ್ತಿ ಯುಂಟಾಗುವುದೆಂಬ ನಂಬಿಕೆಯಿಂದಲೂ ವಾಸವದತ್ತ ಯೌಗಂಧರಾಯಣನ ಮಾತಿಗೆ ಸಮ್ಮತಿಸಿದಳು. ಯೌಗಂಧರಾಯಣನು



ವಾಸವದತ್ತಳಿಗೆ ಬ್ರಾಹ್ಮಣ ಸ್ತ್ರೀಯ ವೇಷ ಹಾಕಿಸಿದ. ವಸಂತಕನು ಒಕ್ಕಣ್ಣಿನ ಬ್ರಹ್ಮ ಚಾರಿಯಾಗಿ ಸಿದ್ಧನಾದ. ತಾನೊಬ್ಬ ಮುದುಕ ಬ್ರಾಹ್ಮಣನ ರೂಪಧರಿಸಿದ. ಮೂವರೂ ಹೊರಟು ವತ್ಸರಾಜ್ಯದ ಗಡಿದಾಟಿ ಮಗಧ ರಾಜ್ಯಕ್ಕೆ ಪ್ರಯಾಣ ಬೆಳೆಸಿದರು. ಅವರು ಅತ್ತ ಹೋದ ಕೂಡಲೇ ರುಮಣ್ವಂತನು ವಾಸವದತ್ತಳಿದ್ದ ಮನೆಗೆ ಬೆಂಕಿ ಹಚ್ಚಿದ. ಜನ ಸೇರುವ ವೇಳೆಗೆ ಮನೆ ಪೂರ್ತಿಯಾಗಿ ಅಗ್ನಿಗೆ ಆಹುತಿಯಾಗಿತ್ತು. ವಾಸವದತ್ತಾ ದೇವಿ ಮತ್ತು ವಸಂತಕರು ಅದರಲ್ಲಿ ಸುಟ್ಟು ಹೋದರೆಂದು ರುಮಣ್ವಂತನು ಸುದ್ದಿ ಹರ ಡಿದ. ಎಲ್ಲರೂ ಗೊಳೋ ಎಂದು ಅತ್ತರು. ಅಂದು ಬೇಟೆ ಮುಗಿಸಿಕೊಂಡು ಬಿಡಾರಕ್ಕೆ



ಬಂದಕೂಡಲೇ ಉದಯನನು ಈ ದುರ್ವಾರ್ತೆ ಕೇಳಿ ಮೂರ್ಛಿತನಾದನು. ಬಹಳ ಹೊತ್ತಾದ ನಂತರ ಆತನಿಗೆ ಸ್ಮೃತಿ ಬಂತು. ಉದಯನನು ತನ್ನ ಪ್ರಿಯಪತ್ನಿಯ ವಿಯೋಗಕ್ಕೆ ಬಹಳ ವಿಲಪಿಸುತ್ತಿದ್ದನಾದರೂ, ವಾಸವದತ್ತಳ ಸಹೋದರ ಗೋಪಾಲಕನು ಬಹಳ ಸಂತಾಪ ಪಡದಿದ್ದುದನ್ನು ಕಂಡು ತನ್ನ ದುಃಖವನ್ನು ನುಂಗಿಕೊಳ್ಳ ತೊಡಗಿದ.

ಅತ್ತ ಛದ್ಮ ವೇಷಧಾರಿಗಳಾದ ಯೌಗಂಧರಾಯಣ, ವಾಸವದತ್ತ, ವಸಂತಕರು ರಾಜೋದ್ಯಾನವನ್ನು ಸೇರಿ, ಅಲ್ಲಿದ್ದ ರಾಜಕುಮಾರಿ ಪದ್ಮಾವತಿಯನ್ನು ಭೇಟಿ ಮಾಡಿದರು. ಆಕೆಯೊಂದಿಗೆ ಯೌಗಂಧರಾಯಣನು ಹೀಗೆಂದು ಹೇಳಿದ.



"ಅಮ್ಮಾ, ಈಕೆ ನನ್ನ ಮಗಳು, ಆವಂತಿಕೆ. ಈಕೆಯ ಪತಿ ದುರಭ್ಯಾಸಗಳಿಗೆ ಬಲಿಯಾಗಿ, ಎಲ್ಲಿಯೋ ದೇಶಾಂತರ ಹೊರಟು ಹೋದ. ನಾನು ಆತನನ್ನು ಹುಡುಕಿ ತರುವ ವರೆವಿಗೂ ಈಕೆಯನ್ನು ನಿಮ್ಮ ಬಳಿ ಇಟ್ಟುಕೊಳ್ಳುವ ಕೃಪೆಮಾಡಬೇಕು. ನನ್ನ ಮಗನೂ ಇವಳ ಹತ್ತಿರಲೇ ಇರುವನು."

ಮೊದಲೇ ದುಃಖಿತಳಾಗಿದ್ದ ವಾಸವದತ್ತಳನ್ನೂ, ಆಕೆಯ ಸೌಂದರ್ಯವನ್ನೂ ನೋಡಿದ ಕೂಡಲೇ ಪದ್ಮಾವತಿಯ ಹೃದಯ ಅನುಕಂಪದಿಂದ ತುಂಬಿತು. ಆಕೆಯನ್ನು ತನ್ನ ಬಳಿಯಲ್ಲಿರಿಸಿಕೊಳ್ಳಲು ಒಪ್ಪಿಕೊಂಡಳು. ಯೌಗಂಧರಾಯಣನು ಅಲ್ಲಿಂದ ವತ್ಸರಾಜ್ಯಕ್ಕೆ ಹಿಂತಿರುಗಿದ.

ವಾಸವದತ್ತ ವಸಂತಕನಕೂಡ ಪದ್ಮಾವತಿಯೊಂದಿಗೆ ಅಂತಃಪುರಕ್ಕೆ ಹೋದಳು. ಆಕೆಯ ಮನವು ಆಗಲೇ ತನ್ನ ಪತಿಗಾಗಿ ಪರಿತಪಿಸುತಿತ್ತು. ಆದರೆ ಆಕೆ ಅಂತಃಪುರದಲ್ಲಿದ್ದ ಸೀತಾದೇವಿಯ ಒಂದು ಚಿತ್ರವನ್ನು ಕಂಡು 'ಈ ಮಹಾತಾಯಿಯ ವಿಯೋಗದ ಮುಂದೆ ನನ್ನದೇನು ಮಹಾ' ಎಂದು ಮನೋನಿಗ್ರಹ ಮಾಡಿಕೊಂಡಳು.

ಕೆಲದಿನಗಳು ಕಳೆದ ತರುವಾಯ ಯೌಗಂಧರಾಯಣನು ಮಗಧರಾಜನಿಗೆ ಮತ್ತೆ ಈ ರೀತಿ ಬರೆದು ಕಳುಹಿಸಿದ: 'ವಾಸವದತ್ತಾದೇವಿಯನ್ನು ಕಳೆದುಕೊಂಡಂದಿನಿಂದ ನಮ್ಮ ರಾಜರು ಶೋಕಸಾಗರದಲ್ಲಿ ಮುಳುಗಿರುವರು.









ಅವರ ಶೋಕವನ್ನು ದೂರಮಾಡಲು ನಿಮ್ಮ ಮಗಳಾದ ಪದ್ಮಾವತಿದೇವಿಯನ್ನು ನಮ್ಮ ರಾಜರಿಗಿತ್ತು ವಿವಾಹಮಾಡಲು ಒಪ್ಪಿಕೊಳ್ಳ ಬೇಕೆಂದು ಕೋರುತ್ತೇನೆ'

ಈಬಾರಿ ಮಗಧರಾಜನು ಅಂಗೀಕರಿಸಿದ. ಉದಯನನು ತನ್ನ ಅಳಿಯನಾಗುವನೆಂದು ಆತನು ಹೆಮ್ಮೆಗೊಂಡನು. ಒಂದು ವಾರದ ನಂತರ ಶುಭಮುಹೂರ್ತವನ್ನಿಟ್ಟರು. ಇದ ರಿಂದ ಪದ್ಮಾವತಿಯ ಆನಂದಕ್ಕೂ ವಾಸವ ದತ್ತಳ ದುಃಖಕ್ಕೂ ಮೇರೆಯಿಲ್ಲ. 'ದೇವಿ ಕಳವಳಪಡಬೇಡಿ. ಈ ವಿವಾಹದಿಂದ ಶತ್ರು ಮಿತ್ರನಾಗುವನು. ಇನ್ನು ನಮ್ಮ ಪ್ರಭುಗಳ ವಿಷಯ ಹೇಳಬೇಕೆ? ನಿಮ್ಮಮೇಲಿನ ಪ್ರೇಮ ಎಂದಿಗೂ ಕುಂಠಿತವಾಗುವುದಿಲ್ಲ. ನನ್ನ ಮಾತು ನಂಬಿ' ಎಂದು ವಾಸವದತ್ತಳನ್ನು ಸಮಾಧಾನ ಪಡಿಸಿದ ವಸಂತಕ.

ಮುಹೂರ್ತಕ್ಕೆ ಸರಿಯಾಗಿ ಉದಯನನು ಸಪರಿವಾರ ಸಮೇತನಾಗಿ ಬಂದನು. ಮಹಾ ವೈಭವದಿಂದ ವಿವಾಹ ನಡೆಯಿತು. ಅಗ್ನಿಸಾಕ್ಷಿ ಯಾಗಿ ವಿವಾಹವಾಗುವ ಸಮಯದಲ್ಲಿಯೇ, ಯೌಗಂಧರಾಯಣನು ಮಗಧರಾಜನಿಂದ ವತ್ಸದೇಶದ ರಾಜನಿಗೆ ಶಾಶ್ವತಮೈತ್ರಿ ಪ್ರಮಾಣವನ್ನು ಮಾಡಿಸಿದ.

ಮದುವೆ ಮುಗಿದ ಕೂಡಲೇ ಉದಯನನು ತನ್ನ ನೂತನ ವಧುವಿನೊಂದಿಗೆ ಲಾವಣಕ್ಕೆ ಹಿಂತಿರುಗಿ ಬಂದುಬಿಟ್ಟ. ಪದ್ಮಾವತಿಯ ಪರಿ ವಾರದೊಂದಿಗೆ ವಾಸವದತ್ತ ಸಹ ಬಂದಳು.

ಆದರೂ ಉದಯನನು ವಾಸವದತ್ತಳನ್ನು ಒಂದು ಕ್ಷಣಸಹ ಮರೆತಿರಲಿಲ್ಲ. ಗಂಡನ ಮನೋಸ್ಥಿತಿಯನ್ನು ಗ್ರಹಿಸಿದ ವಾಸವದತ್ತ ಪದ್ಮಾವತಿಗೆ ಹಿಂದೆ ತಾನು ಅಲಂಕರಿಸಿ ಕೊಳ್ಳುತ್ತಿದ್ದಂತೆಯೇ ಹೂ ಮುಡಿಸಿ, ತಿಲಕ ವನ್ನು ತಿದ್ದಿತೀಡಿ, ಗಂಡನ ಬಳಿಗೆ ಕಳುಹಿಸಿ, ತಾನು ತನ್ನ ಅಣ್ಣ ಗೋಪಾಲಕನಿದ್ದ ಬಿಡದಿಗೆ ಹೋಗಿಬಿಟ್ಟಳು. ಅಣ್ಣ ತಂಗಿಯರು ಒಬ್ಬರ ನ್ನೊಬ್ಬರು ಅಪ್ಪಿಕೊಂಡು ದುಃಖಿಸಿದರು. ಅಲ್ಲಿದ್ದ ಯೌಗಂಧರಾಯಣ, ರುಮಣ್ವಂತರೂ ಕಣ್ಣೀರು ಸುರಿಸಿದರು.

ಇಲ್ಲಿ ರಾಜನು ಶಯನಮಂದಿರದಲ್ಲಿ ತನ್ನ ನೂತನ ವಧು ಧರಿಸಿದ ಹೂ, ತಿಲಕಗಳನ್ನು ಕಂಡು ಆಶ್ಚರ್ಯಚಕಿತನಾದನು.





"ನಿನಗೀ ಅಲಂಕಾರವನ್ನು ಮಾಡಿದವರು ಯಾರು?" ಎಂದು ಉದಯನನು ಪ್ರಶ್ನೆ ಮಾಡಿದ. ಪದ್ಮಾವತಿ ಚಕಿತಳಾಗಿ ನಡೆದ ವಿಷಯವನ್ನೆಲ್ಲಾ ತಿಳಿಸಿದಳು. 'ವೃದ್ಧ ವಿಪ್ರನೊಬ್ಬನು ಅವಂತಿಕೆ ಎಂಬ ತನ್ನ ಮಗಳನ್ನು ಕಾಪಾಡುವಂತೆ ನನ್ನ ಬಳಿ ಬಿಟ್ಟು ಹೋದ. ಆಕೆ ತುಂಬಾ ಜಾಣೆ. ಆಕೆಯೇ ಇಂದು ನನಗೆ ಅಲಂಕಾರ ಮಾಡಿದಳು"

"ಎಲ್ಲಿದ್ದಾಳೆ ಆಕೆ?" ದುಗುಡದಿಂದ ಕೇಳಿದ ರಾಜ. ಪದ್ಮಾವತಿ ತನ್ನ ಚೇಟಿಯರನ್ನು ಕರೆದು ಆವಂತಿಕೆಯನ್ನು ಅಲ್ಲಿಗೆ ಕಳುಹಿಸುವಂತೆ ಹೇಳಿದಳು. ಅವರು "ಅಮ್ಮಾ ಆಕೆ ಇಲ್ಲಿ ಇಲ್ಲ. ಗೋಪಾಲರಾಜರು ಇಳಿದುಕೊಂಡಿರುವ ಮನೆಗೆ ಹೋಗಿಬಿಟ್ಟಳು. ನಾವೆಷ್ಟು ಬೇಡವೆಂದರೂ ಕಿವಿಯಮೇಲೆ ಹಾಕಿಕೊಳ್ಳಲಿಲ್ಲ," ಎಂದರು. "ಅಲ್ಲಿಗೇಕೆ ಹೋದಳು? ನಾನು ಬರುವಂತೆ ಹೇಳಿದೆನೆಂದು ಕರೆದುಕೊಂಡು ಬನ್ನಿ" ಎಂದು ದಾಸಿಯರನ್ನು ಅಟ್ಟಿದಳು ಪದ್ಮಾವತಿ. ಈ ಆವಂತಿಕೆ ಗೋಪಾಲಕನಿರುವ ಬಿಡದಿಗೆ ಹೋದಳೆಂದು ತಿಳಿದು ಉದಯನನ ಸಂದೇಹ ಮತ್ತಷ್ಟು ಹೆಚ್ಚಾಯಿತು. ಆತನು ತಕ್ಷಣವೇ ಗೋಪಾಲಕನ ಮನೆಗೆ ಹೋಗಿ, ಅಲ್ಲಿದ್ದ ವಾಸವದತ್ತಾದೇವಿಯನ್ನು ನೋಡಿದ. ಆತನ ಆನಂದಕ್ಕೆ ಪಾರವೇ ಇಲ್ಲ. ಆಗ ಯೌಗಂಧರಾಯಣನು ರಾಜನಲ್ಲಿ ಕ್ಷಮೆಯಾಚಿಸುತ್ತಾ 'ಮಹಾಪ್ರಭೂ, ಇದೆಲ್ಲವೂ ನನ್ನ ಕಾರ್ಯ. ನಿಮಗೆ ಸಾಮ್ರಾಜ್ಯ ಸಂಪಾದಿಸಿ ಕೊಡಿಸಿ ಮಗಧರಾಜನೊಂದಿಗೆ ಸಖ್ಯವನ್ನು ನೆಲೆಗೊಳಿಸಲು ಈ ವಿವಾಹ ಮಾಡಿಸಿದೆವು" ಎಂದ.

"ಮಂತ್ರಿವರ್ಯರೇ, ಹಾಗೆ ಹೇಳಬೇಡಿ. ನಾನು ರಾಜ್ಯಭಾರವನ್ನು ಬದಿಗೆ ಸರಿಸಿದ್ದರೂ ಯಾವ ತೊಂದರೆಯೂ ಉಂಟಾಗದಂತೆ ನನ್ನನ್ನು ನೋಡಿಕೊಂಡಿರುವುದಕ್ಕೆ ನಾನು ನಿಮಗೆ ಕೃತಜ್ಞನಾಗಿದ್ದೇನೆ" ಎಂದ ವತ್ಸರಾಜ ತುಂಬಿದ ಹೃದಯದಿಂದ. ಮತ್ತು ಉದಯನನು ಪದ್ಮಾವತಿಯ ಔದಾರ್ಯವನ್ನು ಅರ್ಥಮಾಡಿಕೊಂಡ. ಆತನು ತನ್ನಿಬ್ಬರು ಪತ್ನಿಯರನ್ನು ಸಮಾನವಾಗಿ ಪ್ರೀತಿಸುತ್ತಾ ಅಪಾರ ಆನಂದವನ್ನು ಅನುಭವಿಸಿದ.






# ಸಾಕ್ಷಿಯ ಯುಕ್ತಿ

ಒಬ್ಬಾನೊಬ್ಬ ವರ್ತಕನು ವ್ಯಾಪಾರದ ಸಲುವಾಗಿ ದೂರದೇಶಕ್ಕೆ ಪ್ರಯಾಣ ಮಾಡುತ್ತಿದ್ದನು. ಸಂಜೆಯಾಗುವ ವೇಳೆಗೆ ಆತನೊಂದು ಗ್ರಾಮವನ್ನು ತಲುಪಿದನು. ಅಂದು ರಾತ್ರಿಯನ್ನು ಆ ಗ್ರಾಮದಲ್ಲೇ ಕಳೆಯಲು ನಿಶ್ಚಯಿಸಿ ವ್ಯಾಪಾರಿ ತನ್ನ ಕುದುರೆಯನ್ನು ಗ್ರಾಮದ ಕಡೆ ನಡೆಸುತ್ತಾ ಇರುವಲ್ಲಿ ಒಬ್ಬಾತ ಇದಿರಾಗಿ "ಸ್ವಾಮಿ, ನನಗೊಂದು ಪಾವಲಿ ಕೊಡಿ. ನನಗೆ ಅಫೀಮು ತಿನ್ನುವ ಚಟ. ಎರಡು ದಿನಗಳಿಂದ ಒಂದು ಕಾಸೂ ಇಲ್ಲದೆ ನಾನಾ ಅವಸ್ಥೆ ಪಡುತ್ತಿದ್ದೇನೆ" ಎಂದ.

ಅವನಿಗೆ ನಾಲ್ಕಾಣೆ ಕೊಟ್ಟು ಕಳುಹಿಸಿ ವ್ಯಾಪಾರಿ ಗ್ರಾಮದೊಳಕ್ಕೆ ಹೋದನು. ಒಂದು ಮನೆಯ ಮುಂದೆ ಕುದುರೆಯಿಂದ ಇಳಿದು, ಮನೆಯಾತನನ್ನು ಭೇಟಿ ಮಾಡಿ, ತನಗೆ ಅಂದುರಾತ್ರಿ ಮಲಗಿಕೊಳ್ಳಲು ಸ್ವಲ್ಪ ಸ್ಥಳ ಕೊಡುವಂತೆ ಕೇಳಿದ. ಆ ಮನೆಯ ಯಜಮಾನ ಸರಿ ಎಂದು ಒಪ್ಪಿಕೊಂಡ. ವ್ಯಾಪಾರಿ ತನ್ನ ಕುದುರೆಯನ್ನು ಮನೆಯ ಹೊರಗಿದ್ದ ಗೂಟಕ್ಕೆ ಕಟ್ಟಿ, ಆ ರಾತ್ರಿ ಆ ಮನೆಯಲ್ಲಿ ನಿಶ್ಚಿಂತೆಯಾಗಿ ಮಲಗಿಕೊಂಡ.

ವರ್ತಕನು ಬೆಳಗ್ಗೆ ಎದ್ದು ಪ್ರಯಾಣ ಮುಂದುವರಿಸಲು ಹೊರಗೆ ಬಂದ. ಆ ವೇಳೆಗೆ ಮನೆಯ ಯಜಮಾನನು ತನ್ನ ಕುದುರೆಯನ್ನು ಎಲ್ಲಿಗೋ ತೆಗೆದುಕೊಂಡು ಹೋಗಲು ಸಿದ್ಧನಾಗುತ್ತಿರುವುದನ್ನು ಕಂಡ. "ಅಯ್ಯಾ ನಾನು ಈಗಲೇ ಹೋಗಬೇಕಾಗಿದೆ. ದಯಮಾಡಿ ನನ್ನ ಕುದುರೆಯನ್ನು ಎಲ್ಲಿಗೂ ತೆಗೆದುಕೊಂಡು ಹೋಗಬೇಡಿರಿ" ಎಂದು ವರ್ತಕನು ಎಚ್ಚರಿಕೆ ಕೊಟ್ಟ.

ಮನೆಯ ಯಜಮಾನ ಆಶ್ಚರ್ಯದಿಂದ "ಏನು, ನಿನ್ನ ಕುದುರೆ? ಅಲ್ಲ ಇದು ನನ್ನ ಕುದುರೆಯಪ್ಪಾ. ಈ ಗೂಟ ದಿನಾ ಒಂದು ಕುದುರೆಯನ್ನು ಈನುತ್ತದೆ" ಎಂದ.

"ನನ್ನ ಕುದುರೆಯನ್ನು ಅಪಹರಿಸಲು ಈ ಆಟ ಕಟ್ಟಿರುವಿರಿ. ಇದು ತರವಲ್ಲ" ಎಂದ ವರ್ತಕ. "ನನ್ನ ಮಾತಿನಲ್ಲಿ ನಂಬಿಕೆ ಇಲ್ಲದಿದ್ದರೆ ಈ ಊರಿನಲ್ಲಿ ಯಾರನ್ನು ಬೇಕಾದರೂ ಕೇಳಿ.

ಎಂ. ಹರಿಹರಪ್ಪ

ನಮ್ಮ ಮನೆಗೂಟದ ವಿಷಯ ಎಲ್ಲರಿಗೂ ಗೊತ್ತು" ಎಂದ ಮನೆಯ ಯಜಮಾನ.

ಆ ಮನುಷ್ಯ ಶುದ್ಧ ಸುಳ್ಳುಗಾರ. ಆ ಗ್ರಾಮದಲ್ಲಿ ಬಹಳಜನ ಆ ಗುಂಪಿಗೆ ಸೇರಿದವರು. ಅಪರಿಚಿತರು ಯಾರಾದರೂ ಬಂದರೆ ಎಲ್ಲರೂ ಸೇರಿ ಅವರನ್ನು ಮೋಸ ಮಾಡುವರು. ಅದರಿಂದ ಯಾರನ್ನು ಕೇಳಿದರೂ ಆ ಮನೆ ಯಜಮಾನನ ಮಾತನ್ನೇ ಬಲಪಡಿಸುವರು.

ವರ್ತಕನು ಬೇರೆ ಯಾವ ಮಾರ್ಗವೂ ಇಲ್ಲದೆ ಗ್ರಾಮಾಧಿಕಾರಿಯ ಬಳಿಗೆ ಹೋದನು. ಗ್ರಾಮಾಧಿಕಾರಿ ಮನೆಯ ಯಜಮಾನನನ್ನು ಬರಮಾಡಿಕೊಂಡು ವಿಚಾರಣೆ ನಡೆಸಿದ.

"ಸ್ವಾಮಿ, ನಮ್ಮ ಮನೆಗೂಟ ದಿನಾ ಒಂದೊಂದು ಕುದುರೆಯನ್ನು ಹೆರುತ್ತದೆ. ಬೇಕಿದ್ದರೆ ಇದಕ್ಕೆ ಬೇಕಾದಷ್ಟು ಸಾಕ್ಷಿಗಳನ್ನು ಕೂಡಿಸಬಲ್ಲೆ" ಎಂದ ಮನೆಯ ಯಜಮಾನ.

ಗ್ರಾಮಾಧಿಕಾರಿ ವ್ಯಾಪಾರಿಯನ್ನು ಕುರಿತು, "ಏನಯ್ಯಾ, ಈ ಕುದುರೆ ನಿನ್ನದೆಂದು ಹೇಳುವವರು ಯಾರಾದರೂ ಸಾಕ್ಷಿಗಳಿರುವರೇ? ಇದ್ದರೆ ಕರೆದುಕೊಂಡುಬಾ" ಎಂದ. ವರ್ತಕನಿಗೆ ಹಿಂದಿನ ದಿನ ಸಾಯಂಕಾಲ ಅಫೀಮಿಗಾಗಿ ತನ್ನ ಹತ್ತಿರ ನಾಲ್ಕಾಣೆ ಪಡೆದಾತನ ಜ್ಞಾಪಕ ಬಂತು. ಕೂಡಲೇ ಆತನನ್ನು ಹುಡುಕಿಕೊಂಡು ಹೊರಗೆ ಹೋದ. ಮನೆಯ ಯಜಮಾನನೂ ಸಹ ತನ್ನ ಕಡೆ ಸಾಕ್ಷಿಗಳನ್ನು ಕರೆತರಲು ಹೋದ.

ವ್ಯಾಪಾರಿಯ ಹತ್ತಿರ ನಾಲ್ಕಾಣೆ ಪಡೆದ ವ್ಯಕ್ತಿ ಅಫೀಮಿನ ಗುಂಗಿನಲ್ಲೇ ಇದ್ದ. ವರ್ತ



ಕನು ಆ ಅಫೀಮಿನ ಭಕ್ತನನ್ನು ಕಷ್ಟಪಟ್ಟು ಎಬ್ಬಿಸಿ, ತನಗಾಗಿರುವ ಅನ್ಯಾಯವನ್ನು ವಿವರಿಸಿ ಹೇಳಿದ. ಅದನ್ನು ಕೇಳಿದಕೂಡಲೇ ಆ ಅಫೀಮಿನ ಭಕ್ತ ವರ್ತಕನೊಂದಿಗೆ ಗ್ರಾಮಾಧಿಕಾರಿಯ ಬಳಿಗೆ ಬಂದ.

ಆ ವೇಳೆಗಾಗಲೇ ಮನೆಯ ಯಜಮಾನ ತನ್ನ ಕಡೆಯ ಸಾಕ್ಷಿಗಳನ್ನು ಗ್ರಾಮಾಧಿಕಾರಿಯ ಮುಂದೆ ಹಾಜರುಪಡಿಸಿ, ತನ್ನ ಮನೆಯ ಗೂಟ ದಿನವೂ ಒಂದೊಂದು ಕುದುರೆಯನ್ನು ಹೆರುತ್ತದೆಂದು ಸಾಕ್ಷ್ಯಕೊಡಿಸಿದ್ದ. ಅಫೀಮಿನ ಭಕ್ತನನ್ನು ಕಂಡಕೂಡಲೇ ಮನೆಯ ಯಜಮಾನನ ಕಡೆಯ ಸಾಕ್ಷಿಗಳು ಪಕಪಕ ನಕ್ಕು "ಹುಡುಕಿ ಹುಡುಕಿ ಈ ಅಫೀಮಿನ ಭಕ್ತನನ್ನು ಸಾಕ್ಷಿಕೊಡಲು ಕರೆತಂದೆಯಾ? ಇವನ ಮಾತನ್ನು ಯಾರು ನಂಬುತ್ತಾರೆ" ಎಂದು ಪರಿಹಾಸ್ಯ ಮಾಡಿದರು.

ಮತ್ತು ಇಳಿದಕೂಡಲೇ ಆಕಳಿಸುತ್ತಿದ್ದ ಅಫೀಮಿನ ಭಕ್ತನನ್ನು ಕಂಡು ಗ್ರಾಮಾಧಿಕಾರಿ ವ್ಯಾಪಾರಿಯನ್ನು ಕುರಿತು "ಹೋಗಿ ಹೋಗಿ ಈ ಆಸಾಮಿಯನ್ನು ಕರೆತಂದಿರುವೆಯಲ್ಲಾ. ನಿನ್ನ ಈ ಅಫೀಮು ಭಕ್ತ ಸಾಕ್ಷಿಯ ಮಾತುಗಳನ್ನು ಹೇಗೆ ನಂಬಲಿ?" ಎಂದ.

ತಟಕ್ಕನೆ ಅಫೀಮಿನ ಭಕ್ತನು ಎದ್ದು ನಿಂತು "ಅಯ್ಯಾ ನಾನು ಗುಂಗಿನಲ್ಲಿಲ್ಲ. ರಾತ್ರಿಯೆಲ್ಲಾ ಕೆರೆಯ ತಳಭಾಗದಲ್ಲಿ ಬೆಂಕಿಮಾಡಿ ಕೆರೆಯಲ್ಲಿದ್ದ ಮೀನುಗಳನ್ನು ಬೇಯಿಸಿದೆ. ಕಣ್ಣುಮುಚ್ಚಿದ್ದರೆ ನನ್ನಾಣೆ. ಅದರಿಂದ ನಿದ್ದೆ ಮತ್ತು ಹಿಡಿದಿದೆ" ಅಷ್ಟೇ ಎಂದ.

ಈ ಮಾತನ್ನು ಕೇಳಿ ಎಲ್ಲರೊಂದಿಗೆ ಗ್ರಾಮಾಧಿಕಾರಿಸಹ ನಕ್ಕು "ನಿನ್ನದು ತಿಳಿವಳಿಕೆಯಿಲ್ಲದ ಸಾಕ್ಷ್ಯವೆಂದು ನಿನ್ನ ಮಾತುಗಳೇ ಹೇಳುತ್ತವೆ. ಕೆರೆಯ ತಳಭಾಗದಲ್ಲಿ ಬೆಂಕಿ ಮಾಡುವುದೆಂದರೇನು?"

"ಅದೇನು ಹಾಗೆಂದರೆ? ಗೂಟ ಕುದುರೆಗಳನ್ನು ಹೆರುವಾಗ ಕೆರೆಯ ತಳಭಾಗದಲ್ಲಿ ಬೆಂಕಿಮಾಡಲು ಸಾಧ್ಯವಿಲ್ಲವೇ? ನನ್ನದು ತಿಳುವಳಿಕೆಯಿಲ್ಲದ ಸಾಕ್ಷ್ಯವೇ?" ಎಂದು ಮರು ಸವಾಲು ಹಾಕಿದ ಅಫೀಮು ಭಕ್ತ.

ಗ್ರಾಮಾಧಿಕಾರಿ ಪೆಚ್ಚಾಗಿ ಕುದುರೆಯನ್ನು ಆ ವ್ಯಾಪಾರಿಗೇ ಕೊಡಿಸಿಕೊಟ್ಟ.





# ಕಾಗೆ ಕೂಗುವ ಕಾರಣ

ಭೋಜರಾಜನು ಸಾಹಿತ್ಯ ಪ್ರೇಮಿ. ಕವಿ ಪಂಡಿತೋತ್ತಮರಿಗೆ ಭಾರಿಭಾರಿ ಬಹುಮಾನಗಳನ್ನು ಕೊಡುತ್ತಿದ್ದ. ತನಗೆ ಪ್ರಿಯವಾಗುವಂತೆ ಕವನ ಹೇಳಿದರೆ ಒಂದೊಂದು ಅಕ್ಷರಕ್ಕೆ ಲಕ್ಷ ವರಹಗಳನ್ನು ಕೊಡುತ್ತಿದ್ದುದುಂಟು. ಈ ಬಗೆಯ ಪ್ರೋತ್ಸಾಹದಿಂದ ಆತನ ರಾಜ್ಯದಲ್ಲಿ ಸಾಮಾನ್ಯವಾಗಿ ಎಲ್ಲರೂ ಕವಿಗಳೇ! ಸಣ್ಣ ಸಣ್ಣ ಹುಡುಗರೂ ಸಹ ಪಂಡಿತರೇ ಆದರು.

ಅನಾದಿಕಾಲದಿಂದ ಕಾಶಿ ಪಂಡಿತರಿಗೆ ದೇಶದಲ್ಲಿ ಬಹಳ ಪ್ರಖ್ಯಾತಿಯಿತ್ತು. ಆದರೆ ಭೋಜರಾಜನ ಕಾಲದಲ್ಲಿ ಧಾರಾನಗರದ ಪಂಡಿತರ ಖ್ಯಾತಿ ವಿಶೇಷವಾಯಿತು. ಕಡೆಕಡೆಗೆ ದೇಶದಲ್ಲಿ ಕಾಶಿ ಪಂಡಿತರನ್ನು ಕೇಳುವವರೇ ಇಲ್ಲದಂತಾಯಿತು.

ಇದನ್ನು ಕಂಡು ಕಾಶಿ ಪಂಡಿತರಿಗೆ ಕೋಪವುಂಟಾಯಿತು. ಅವರೆಲ್ಲಾ ಒಂದು ಸಭೆ ಸೇರಿಕೊಂಡು ಬಹಳ ಚರ್ಚೆ ಮಾಡಿದರು: ಕಾಶಿ ಪಂಡಿತರು ಕೆಲವರು ಧಾರಾನಗರಕ್ಕೆ ಹೋಗಿ ಅಲ್ಲಿನ ಪಂಡಿತೋತ್ತಮರನ್ನು ಬಹಿರಂಗ ಚರ್ಚೆಯಲ್ಲಿ ಸೋಲಿಸಿದ ಹೊರತು ಕಾಶಿನಗರದ ಹಿರಿಮೆ ಉಳಿಯುವುದಿಲ್ಲವೆಂದು ಆ ಸಭೆಯಲ್ಲಿ ತೀರ್ಮಾನವಾಯಿತು. ಭೋಜರಾಜನ ಆಸ್ಥಾನದಲ್ಲಿದ್ದ ದೊಡ್ಡದೊಡ್ಡ ಪಂಡಿತರನ್ನು ಸೋಲಿಸಲು ನಾಲ್ಕುಜನ ಪಂಡಿತೋತ್ತಮರನ್ನು ಆರಿಸಿ, ಅವರನ್ನು ಧಾರಾನಗರಕ್ಕೆ ಕಳುಹಿಸಿದರು.

ಈ ನಾಲ್ಕುಜನ ಕಾಶಿ ಪಂಡಿತರು ಪ್ರಯಾಸಪಟ್ಟು, ಅನೇಕ ದಿನಗಳ ಪ್ರಯಾಣಮಾಡಿದನಂತರ ಧಾರಾನಗರವನ್ನು ಸೇರಿದರು. ಅಲ್ಲಿ ಸಾಮಾನ್ಯ ಗೃಹಸ್ಥನೊಬ್ಬನ ಮನೆಯಲ್ಲಿ ಬಿಡಾರ ಮಾಡಿದರು.

ಧಾರಾನಗರದ ಪಂಡಿತರ ಪ್ರಜ್ಞಾವಿಶೇಷಗಳನ್ನೂ, ಅವರನ್ನು ಸೋಲಿಸುವ ರೀತಿಯನ್ನೂ ಕುರಿತು ಅವರು ತುಂಬಾ ಆಲೋಚಿಸುತ್ತಿದ್ದರು. ತಾವು ಸೋತುಹೋದರೆ ಅವಮಾನವಾಗುವುದು ತಮಗೆ ಮಾತ್ರವಲ್ಲದೆ ಇಡೀ ಕಾಶಿನಗರಕ್ಕೇ ಅಪಖ್ಯಾತಿ ಬರುವುದೆಂದು ಅವರು ಭಯಪಡುತ್ತಿದ್ದರು.

ಡಿ. ವಿ. ಮಿತ್ರ



ಅವರು ಬಂದ ಮಾರನೆಯದಿನ ಬೆಳಗ್ಗೆ ನಿತ್ಯಕೃತ್ಯಗಳನ್ನು ತೀರಿಸಿಕೊಳ್ಳುತ್ತಿರುವ ಸಮಯದಲ್ಲಿ ಒಂದು ವಿಚಿತ್ರ ಪ್ರಸಂಗ ನಡೆಯಿತು. ಮನೆಯಲ್ಲಿದ್ದ ಸಣ್ಣ ಹುಡುಗನು ತನ್ನ ಅಕ್ಕನನ್ನು ಕುರಿತು,

"ಅಕ್ಕಾ, ಪ್ರತಿದಿನವೂ ಅರುಣೋದಯವಾಗುವ ವೇಳೆಗೆ ಸರಿಯಾಗಿ ಕಾಗೆಗಳು ಏಕೆ ಕೂಗಿಕೊಳ್ಳುವುವು?" ಎಂದು ಕೇಳಿದ. ನೀರು ತರಲು ಬಿಂದಿಗೆಯನ್ನು ಸೊಂಟಕ್ಕೇರಿಸಿ ಭಾವಿಯ ಕಡೆಗೆ ಹೋಗಲು ಸಿದ್ಧವಾಗಿದ್ದ ಆ ಹುಡುಗಿ "ಮನೆಗೆ ನಾಲ್ವರು ಕಾಶಿ ಪಂಡಿತರು ಬಂದಿದ್ದಾರೆ. ಇಷ್ಟೊಂದು ಚಿಕ್ಕ ಸಂದೇಹವನ್ನು ಅವರು ಪರಿಹರಿಸದಿರಲಾರರು ಅವರನ್ನು ಕೇಳು ಬೇಕಾದರೆ" ಎಂದು ಹೇಳಿ ಅಲಕ್ಷ್ಯವಾಗಿ ಹೊರಟುಹೋದಳು. ಕೂಡಲೇ ಆ ಹುಡುಗನು ಕಾಶಿಪಂಡಿತರ ಬಳಿಗೆ ಓಡಿ ಬಂದು "ಪಂಡಿತರೇ, ನನ್ನ ಈ ಪುಟ್ಟ ಸಂದೇಹವನ್ನು ಬಗೆಹರಿಸಿ. ದಿನಾ ಬೆಳಗಾಗುತ್ತಿರುವ ಸಮಯದಲ್ಲಿ ಕಾಗೆಗಳು ಏಕೆ ಕೂಗುವುದು? ದಯಾಮಾಡಿ ಹೇಳಿರಿ" ಎಂದು ವಿನಯದಿಂದ ಕೇಳಿದ.

ಕಾಶಿಪಂಡಿತರು ಒಬ್ಬರ ಮುಖವನ್ನು ಒಬ್ಬರು ನೋಡಿದರು. ವಾಸ್ತವವಾಗಿ ಕಾಗೆಗಳು ಏಕೆ ಬೆಳಗ್ಗೆ ಕಿರಿಚುವುವೋ ಅವರಿಗೆ ತಿಳಿಯದು. ಅವರಿಗೆ ಅಂತಹ ಸಂದೇಹ ಎಂದೂ ಉಂಟಾಗಲಿಲ್ಲ. ಈ ಸಂದೇಹಕ್ಕೆ ಒಂದು ಸಮಾಧಾನವಿರಬಹುದೆಂದು ಅವರು ಯೋಚಿಸಿಯೂ ಇರಲಿಲ್ಲ.



ಹುಡುಗನಿಗೆ ಯಾವುದೋ ಒಂದು ಸಮಾಧಾನ ಹೇಳಬೇಕೆಂದು, ತಮ್ಮ ಮನಸ್ಸಿಗೆ ತೋರಿದುದನ್ನು ಹೇಳಿದರು. "ಕಾಗೆಗಳು ಸಂಭಾಷಣೆ ನಡೆಸುತ್ತವೆ." ಎಂತಲೂ, "ಏನೂ ತೋಚದೆ ಕಾಕಾ ಎಂದು ಅರಚುವುವು" ಎಂತಲೂ ಹೇಳಿದರು. ಆ ಹುಡುಗನಿಗೆ ಆ ಉತ್ತರಗಳಿಂದ ಸ್ವಲ್ಪ ಕೂಡ ಸಮಾಧಾನ ವುಂಟಾಗಲಿಲ್ಲ.

ಇಷ್ಟರಲ್ಲಿ ಆ ಹುಡುಗನ ಅಕ್ಕ ನೀರಿನ ಕೊಡವನ್ನು ಹಿಡಿದುಕೊಂಡು ಹಿಂತಿರುಗಿದಳು. ಅವಳನ್ನು ಕಾಣುತ್ತಲೇ—

"ಅಕ್ಕಾ, ನನ್ನ ಸಂದೇಹವನ್ನು ನೀನಾದರೂ ಬಿಡಿಸಬಾರದೆ? ಬೆಳಗಾಗುವವೇಳೆಗೆ ಕಾಗೆಗಳು ಏಕಷ್ಟು ಗಲಾಟೆ ಮಾಡುವುವು?" ಎಂದು ಹುಡುಗನು ಮತ್ತೆ ಕೇಳಿದ.

"ಕಾಶಿಪಂಡಿತರು ಹೇಳಲಿಲ್ಲವೆ?" ಎಂದು ಕೇಳಿದಳು. "ಸರಿಯಾಗಿ ಹೇಳಿಲ್ಲ; ಅವರಿಗೆ ಸರಿಯಾಗಿ ತಿಳಿದಂತೆ ಇಲ್ಲಕ್ಕ" ಎಂದ ತಮ್ಮ.

"ಓ, ಹಾಗಾದರೆ ನಾನು ಹೇಳುತ್ತೇನೆ ಕೇಳು. ಸೂರ್ಯಭಗವಾನನು ಕಪ್ಪಾದ ಕತ್ತಲೆಯನ್ನು ದೂರಮಾಡುತ್ತಾ ಬರುತ್ತಿರುವುದನ್ನು ಕಂಡು ಕಪ್ಪಗಿರುವ ತಮ್ಮನ್ನೂ ಸಹ ಕತ್ತಲೆ ಎಂದು ಭಾವಿಸಿ, ನಿರ್ಮೂಲ ಮಾಡುವನೇನೋ ಎಂದು ಕಾಗೆಗಳು 'ನಾವು ಕತ್ತಲೆಯಲ್ಲ, ಕಾಗೆಗಳು, ಕಾಗೆಗಳು' ಎಂದು ಕಾಕಾ ಕೂಗಿ ಸೂರ್ಯಭಗವಾನನಿಗೆ ಸೂಚಿಸುತ್ತವೆ" ಎಂದು ಹೇಳಿ ಆ ಹುಡುಗಿ ಒಳಕ್ಕೆ ನಡೆದಳು.

ತನ್ನ ಸಂದೇಹ ಪರಿಹಾರವಾಯಿತೆಂದು ಆ ಚಿಕ್ಕ ಹುಡುಗನು ಆನಂದದಿಂದ ಕುಣಿದಾಡ ಹತ್ತಿದನು.

ಇದೆಲ್ಲವನ್ನೂ ಕೇಳುತ್ತಿದ್ದ ಪಂಡಿತರು ಮತ್ತೊಂದು ಬಾರಿ ಒಬ್ಬರ ಮುಖವನ್ನು ಒಬ್ಬರು ನೋಡಿಕೊಂಡರು. ಸಾಮಾನ್ಯ ಗೃಹಸ್ಥನೊಬ್ಬನ ಅವಿವಾಹಿತ ಮಗಳೇ ಇಷ್ಟೊಂದು ಪ್ರತಿಭಾವಂತಳಾಗಿದ್ದಾಳೆ; ಇನ್ನು ಈ ದೇಶದ ಪಂಡಿತರೆದುರಿಗೆ ನಿಂತು ವಾದಿಸಲಾರೆವೆಂದು ಅವರಿಗೆ ತೋರಿತು. ಅವರು ಯಾವ ರಗಳೆಯೂ ಹಚ್ಚಿಕೊಳ್ಳದೆ ತಮ್ಮ ನಗರಕ್ಕೆ ಹಿಂತಿರುಗಿದರು.






## 13

[ಗುಹೆಯಲ್ಲಿದ್ದ ಸಮರಸೇನನನ್ನು ವ್ಯಾಘ್ರದತ್ತನ ಭಟರು ಬಂಧಿಸಿದರು. ವ್ಯಾಘ್ರದತ್ತನು ಶಾಕ್ತೇಯನನ್ನು ಕುರಿತು, ಆತನ ತ್ರಿಶೂಲವನ್ನು ಕುರಿತು ಪ್ರಶ್ನೆಮಾಡಿದನು. ನಾನರಿಯೆನೆಂದುದಕ್ಕೆ ಸಮರಸೇನನನ್ನು ಕೊಲ್ಲಲು ನಿರ್ಧರಿಸಿದರು. ಆದರೆ ಆ ರಾತ್ರಿ ಇಬ್ಬರು ಹೊಸಬರು ಬಂದು ಆತನನ್ನು ಸೆರೆಯಿಂದ ಬಿಡಿಸಿಕೊಂಡು ಹೋದರು—ತರುವಾಯ]

ಸಮರಸೇನನೂ ಆತನನ್ನು ಸೆರೆಯಿಂದ ಬಿಡಿಸಿದ ಇಬ್ಬರು ಸೈನಿಕರೂ ಹಳ್ಳಿಯನ್ನು ಸೇರಿದಾಗ, ಅಲ್ಲಿನ ಸ್ಥಿತಿ ಅತ್ಯಂತ ಗೊಂದಲಮಯವಾಗಿತ್ತು. ವ್ಯಾಘ್ರದತ್ತನ ಭಟರು ಬಿಚ್ಚುಕತ್ತಿಗಳನ್ನು ಹಿಡಿದುಕೊಂಡು ಆ ಹಳ್ಳಿಯಲ್ಲಿದ್ದ ಪ್ರತಿಮನೆಯನ್ನೂ ಶೋಧನೆ ಮಾಡುತ್ತಿದ್ದರು. ಅನೇಕ ಹಳ್ಳಿಗರು ಭಯದಿಂದ ಸುತ್ತಮುತ್ತಲಿನ ಬೆಟ್ಟಗಳತ್ತ ಪಲಾಯನ ಮಾಡುತ್ತಿದ್ದರು.

"ಶಿವದತ್ತನೆಲ್ಲಿ? ಶಿವದತ್ತನೆಲ್ಲಿರುವನು?" ಎಂದು ಅರಚುತ್ತಾ ಸೈನಿಕರು ತಮಗೆ ಎದುರಾದವರನ್ನೆಲ್ಲಾ ಪ್ರಶ್ನಿಸುತ್ತಿದ್ದರು. "ನಾವು ಏನೂ ಅರಿಯೆವು" ಎಂದು ಅವರು ಉತ್ತರ ಕೊಡುತ್ತಿದ್ದರು. ಆಗ ಆ ಸೈನಿಕರು ಅವರಿಗೆ ನಾನಾ ಯಾತನೆ ಕೊಡುತ್ತಿದ್ದರು.

ಕೊಂಚ ದೂರದಲ್ಲಿರುವಾಗಲೇ ಸಮರಸೇನನಿಗೂ ಆತನೊಂದಿಗಿದ್ದ ಸೈನಿಕರಿಗೂ ಈ ಭಯಂಕರದೃಶ್ಯ ಕಾಣಿಸಿತು. ಅವರು ನೆಟ್ಟಗೆ ಹಳ್ಳಿಗೆಹೋಗಿ, ಮರಗಳ ಮತ್ತು ಪೊದೆಗಳ ಹಿಂದೆ ಅವಿತುಕೊಂಡು ಗಮನಿಸುತ್ತಿದ್ದರು. 'ಯಾರು ಈ ಶಿವದತ್ತ?' ಎಂಬ ಅನುಮಾನ ಸಮರಸೇನನನ್ನು ಕಿತ್ತು ತಿನ್ನುತಲಿತ್ತು. "ಈ ಶಿವದತ್ತನೆಂಬುವನು ಯಾರು?






ಅವನಿಗಾಗಿ ಈ ಹಳ್ಳಿಯ ನಿವಾಸಿಗಳನ್ನು ಪೀಡಿಸುತ್ತಿರುವ ಈ ಸೈನಿಕರು ಯಾರು?'' ಎಂದು ಸಮರಸೇನನು ತನ್ನ ಸಂಗಡ ಇದ್ದ ಸೈನಿಕರನ್ನು ಕೇಳಿದನು.

ಆಗ ಆ ಸೈನಿಕರಲ್ಲೊಬ್ಬನು "ಶಿವದತ್ತ ನಮ್ಮ ನಾಯಕ. ನಿಮ್ಮನ್ನು ಆತನ ಆಜ್ಞೆಯ ಪ್ರಕಾರ ಸೆರೆಯಿಂದ ಬಿಡಿಸಿದೆವು. ಹಳ್ಳಿಯವರಿಗೆ ಕಿರುಕುಳ ಕೊಡುತ್ತಿರುವುದು ವ್ಯಾಘ್ರದತ್ತನ ಸೈನಿಕರು'' ಎಂದನು.

ಈ ಉತ್ತರ ಸಮರಸೇನನಿಗೆ ಸಂತೃಪ್ತಿಯಾಗಲಿಲ್ಲ. ಶಿವದತ್ತನು ತನ್ನಿಂದ ಯಾವುದೋ ಪ್ರತಿಫಲವನ್ನಾಶಿಸಿ, ಸಹಾಯವನ್ನಪೇಕ್ಷಿಸಿ, ತನ್ನನ್ನು ಸೆರೆಮನೆಯಿಂದ ಬಿಡಿಸಿದನೋ ಎಂದು ಊಹಿಸಲು ಅಸಾಧ್ಯವಾಯಿತು. ಶಿವದತ್ತ ವ್ಯಾಘ್ರದತ್ತರಲ್ಲಿ ಹಗೆತನ ಬೆಳೆಯಲು ಕಾರಣವೇನೋ ಸಮರಸೇನನಿಗೆ ತಿಳಿಯದು. "ಹಾಗಾದರೆ ನಾವೀಗ ಏನು ಮಾಡಬೇಕು?'' ಎಂದು ಕೇಳಿದ ಸಮರಸೇನ.

ಆತನೊಂದಿಗಿದ್ದ ಸೈನಿಕರು ಒಬ್ಬರಮುಖವನ್ನೊಬ್ಬರು ನೋಡಿಕೊಂಡರು. ಅವರ ಧೋರಣೆ ನೋಡಿದರೆ ಮುಂದಿನ ಕರ್ತವ್ಯವನ್ನು ನಿರ್ಧರಿಸಲಾರದೆ ಅವರಿಬ್ಬರೂ ಒದ್ದಾಡುತ್ತಿರುವಂತೆ ತೋರುತಿತ್ತು.

"ಶಿವದತ್ತನು ನಿಮ್ಮನ್ನು ಇಲ್ಲಿಗೆ ಕರೆದುಕೊಂಡು ಬರುವಂತೆ ಆಜ್ಞೆ ಮಾಡಿದನು. ಆತನು ನಿಮ್ಮ ಗೆಳೆತನವನ್ನು ಬಯಸಿ, ನಮ್ಮನ್ನು ಈ ಕಾರ್ಯಕ್ಕೆ ನೇಮಿಸಿದನು. ಆದರೆ ಆತನು ಈ ಹಳ್ಳಿಯಲ್ಲಿರುವ ವಿಷಯ ಹೇಗೋ ವ್ಯಾಘ್ರದತ್ತನಿಗೆ ತಿಳಿದು ಹೋಗಿರಬೇಕು. ಆದುದರಿಂದಲೇ ಆತನ ಭಟರು ಈ ಹಳ್ಳಿಯನ್ನೆಲ್ಲಾ ಶೋಧಿಸುತ್ತಿರುವರು. ಶಿವದತ್ತನು ಮೊದಲೇ ಈ ಪ್ರಮಾದವನ್ನು ಅರಿತು, ಎಲ್ಲಿಯೋ ತಲೆಮರೆಯಿಸಿಕೊಳ್ಳಲು ಓಡಿ ಹೋಗಿರಬಹುದು'' ಎಂದನು.

ಶಿವದತ್ತನು ಎತ್ತಕಡೆ ಓಡಿ ಹೋದನೋ ತಿಳಿದಹೊರತು ತಾವು ಅತ್ಯಂತ ಪ್ರಮಾದಕರ ಪ್ರಸಂಗದಲ್ಲಿ ಸಿಲುಕುತ್ತೇವೆಂದು ಸೈನಿಕರೂ, ಸಮರಸೇನನೂ ಗ್ರಹಿಸಿದರು. ಈ ಸಮಯದಲ್ಲಿ ಏನು ಮಾಡಬೇಕೆಂದು ಆಲೋಚಿಸುತ್ತಿರುವಷ್ಟರಲ್ಲಿ ಅವರ ಹಿಂಬದಿಯಿಂದ ಯಾರೋ ಸಿಳ್ಳು ಹಾಕಿದ ಶಬ್ದವಾಯಿತು.

ತತ್ ಕ್ಷಣ ಆ ಮೂವರು ಅತ್ತಕಡೆ ತಮ್ಮ ದೃಷ್ಟಿ ಹಾಯಿಸಿದರು. ಒಂದು ಕೊಂಬೆಯಮೇಲೆ ಕುಳಿತಿದ್ದ ವ್ಯಕ್ತಿ ಅವರಕಡೆಗೆ ಕೈಬೀಸುತ್ತಿದ್ದನು.

ಹಾಗೆ ಸಂಜ್ಞೆಮಾಡಿದಾತನು ಮಿತ್ರನೋ, ಶತ್ರುವೋ ತಿಳಿಯಲಾರದೆ ಅವರು ಸಂದೇಹಕ್ಕೊಳಗಾದರು. ಆದರೆ ತಾನು ಈ ಪ್ರದೇಶಕ್ಕೆ ಹೊಸಬ. ತನ್ನೊಂದಿಗಿದ್ದವರು ಹೇಗೆ ನಡೆದುಕೊಳ್ಳುವಂತೆ ಸೂಚಿಸಿದರೆ ಹಾಗೆ ನಡೆದುಕೊಳ್ಳಲು ಸಮರಸೇನನು ನಿಶ್ಚಯಿಸಿದನು. ಹಾಗಲ್ಲದೆ ಬೇರೆ ಗತ್ಯಂತರವೇ ಇಲ್ಲ.

ಸಮರಸೇನನೊಂದಿಗಿದ್ದ ಸೈನಿಕರಲ್ಲಿ ಒಬ್ಬನು ಮರುಸಿಳ್ಳು ಹಾಕಿದನು. ಅದಕ್ಕೆ ಉತ್ತರವಾಗಿ ಮರದ ಕೊಂಬೆಗಳಲ್ಲಿ ಅವಿತಿಟ್ಟುಕೊಂಡಿದ್ದ ವ್ಯಕ್ತಿ ಮತ್ತೆರಡು ಬಾರಿ ಸಿಳ್ಳುಹಾಕಿ ತನ್ನ ಎಡಗೈಯಿಂದ ಬಲಗೈಯನ್ನು ಮೇಲಕ್ಕೆತ್ತಿದನು." ಸಂದೇಹವಿಲ್ಲ; ಅವನು ನಮ್ಮ ಮಿತ್ರ. ಈ ರಹಸ್ಯ ಸಂಕೇತ ಗ್ರಹಿಸಿದ. ಇದು ಶಿವದತ್ತನ ಸಂಗಡಿಗರಿಗೆ ಹೊರತು ಅನ್ಯರಿಗೆ ತಿಳಿಯದು. ಬನ್ನಿ ಹೋಗುವಾ" ಎಂದನಾ ಸೈನಿಕ.

ಸಮರಸೇನನೂ ಸೈನಿಕರೂ ಮರೆಯಾಗಿದ್ದ ಸ್ಥಳದಿಂದ ಆ ನೂತನವ್ಯಕ್ತಿ ಕುಳಿತಿದ್ದ ಮರದಡಿಗೆ ಹೋದರು. ಇವರು ಮೂವರು ಮರದಡಿಗೆ ಬಂದಕೂಡಲೇ ಆ ಹೊಸಬನು ಮರದಿಂದ ಕೆಳಗೆ ಇಳಿದನು.

"ನಿಮಗಾಗಿ ನಾನಿಲ್ಲಿ ಕಾದಿದ್ದೇನೆ. ಇಂದು ಹೊತ್ತಾರೆ ವ್ಯಾಘ್ರದತ್ತನ ಸೈನಿಕರು ಈ ಹಳ್ಳಿಯಮೇಲೆ ಧಾಳಿಮಾಡಿದರು. ಈ ವಿಷಯ







ಆ ಹೊಸಬನನ್ನು ಕುರಿತು ಕೇಳಿದ. ಅದಕ್ಕೆ ಆ ಹೊಸಬನು "ಆತನೆಲ್ಲಿರುವ ನೆಂಬುದನ್ನು ನನಗೆ ತಿಳಿಸಲಿಲ್ಲ. ಆದರೆ ಈ ನಕ್ಷೆಯನ್ನು ನನ್ನ ಕೈಗೆ ಕೊಟ್ಟರು. ಅವರಿರುವ ಸ್ಥಳ ವನ್ನು ಇದರಲ್ಲಿ ಗುರುತು ಮಾಡಿರುವರಂತೆ, ನೀವೇ ಅದನ್ನು ಪರೀಕ್ಷಿಸಿ ನೋಡಿಕೊಳ್ಳಿ. ನನಗೇನೂ ಅರ್ಥವಾಗಲಿಲ್ಲ" ಎಂದು ಒಂದು ಸುರುಟಿದ್ದ ನಕ್ಷೆಯನ್ನು ಸಮರಸೇನನ ಕೈಗೆ ಕೊಟ್ಟನು.

ಸಮರಸೇನನು ಆ ನಕ್ಷೆಯನ್ನು ಸೂಕ್ಷ್ಮ ವಾಗಿ ಪರಿಶೀಲಿಸಿದನು. ಅದರಲ್ಲಿ ಬೆಟ್ಟಗುಡ್ಡ ಗಳು, ಪಾಳುಬಿದ್ದಿದ್ದ ಗೃಹಗಳು, ಬಾವಿಗಳು, ಕೊಳಗಳು ಚಿತ್ರಿಸಲಾಗಿತ್ತು. ಪ್ರತಿ ಚಿತ್ರದ ಅಡಿಯಲ್ಲೂ ಅದರ ಹೆಸರನ್ನು ಸ್ಪಷ್ಟವಾಗಿ ಬರೆದಿತ್ತು. ಆದರೆ ಶಿವದತ್ತನು ಎಲ್ಲಿ ತಲೆ ಮರೆಯಿಸಿಕೊಂಡಿರುವನೋ ತಿಳಿಯಲು ಅವಕಾಶವಾಗುವಂತಹ ಗುರುತು ಯಾವುದೂ ಅದರಲ್ಲಿ ಕಾಣಿಸಲಿಲ್ಲ.

"ಶಿವದತ್ತನು ಬೆಟ್ಟಗುಡ್ಡಗಳಲ್ಲಿರುವ ಪಾಳುಬಿದ್ದ ಗೃಹಗಳ ಕಡೆ ಓಡಿಹೋದು ದೇನೋ ಉಂಟು. ಆದರೆ ಆಪತ್ತಿನಲ್ಲಿ ಸಿಲುಕಿಕೊಂಡಿರುವಾತನು ಇಂತಹ ಸ್ಥಳಕ್ಕೆ ಹೋಗುವುದರ ಅರ್ಥವೇನೋ ನನಗೆ ತಿಳಿ ಯದು. ಅದರ ಕಾರಣವೇನಾದರಾಗಿರಲಿ, ನಾವು ಅಲ್ಲಿಗೆ ಹೋಗಲೇಬೇಕಷ್ಟೆ" ಎಂದ ಸಮರಸೇನ, ಸೈನಿಕರನ್ನು ಕುರಿತು. ಹೌದೆಂಬಂತೆ ಎಲ್ಲರೂ ತಲೆಯಾಡಿಸಿದರು.

ವನ್ನು ಬೇಹುಗಾರರಿಂದ ಮೊದಲೇ ಅರಿತಿದ್ದ ಶಿವದತ್ತರು ತಮ್ಮ ಸಂಗಡಿಗರೊಂದಿಗೆ ಎಲ್ಲಿಗೋ ಪಲಾಯನ ಮಾಡಿದರು. ನಾನು ನಿಮ್ಮನ್ನು ನಿರೀಕ್ಷಿಸುತ್ತಾ ಕುಳಿತಿದ್ದೆ" ಎಂದ.

ಅವನ ಮಾತು ಕೇಳಿ ಎಲ್ಲರಿಗೂ ಸ್ವಲ್ಪ ಉಸಿರಾಡುವಂತಾಯಿತು. ಆದರೆ ಶಿವದತ್ತನು ಎಲ್ಲಿಗೆ ಹೋದ? ಎತ್ತ ಹೋದ? ಆತನ ಬಳಿ ಸೇರುವುದೆಂತು? ಎಂಬ ಸಮಸ್ಯೆಗಳು ತಲೆದೋರಿದವು.

"ಇವರೇ ಸಮರಸೇನರು. ವ್ಯಾಘ್ರದತ್ತನ ಸೆರೆಯಿಂದ ಬಿಡಿಸಿಕೊಂಡು ಬಂದಿದ್ದೇವೆ. ಇವರು ಆದಷ್ಟು ಬೇಗ ಶಿವದತ್ತರನ್ನು ಭೇಟಿ ಯಾಗಬೇಕು. ಆತನೆಲ್ಲಿರುವನೆಂಬುದು ನಿನಗೆ ತಿಳಿದಿದೆಯೇ?" ಎಂದು ಒಬ್ಬ ಸೈನಿಕ





ಆ ನಕ್ಷೆಯ ಸಹಾಯದಿಂದ ದಾರಿ ತೋರಿಸ ಬೇಕಾದ ಬಾಧ್ಯತೆ ಸಮರಸೇನನ ಪಾಲಿಗೆ ಬಿದ್ದಿತು. ಆತನೊಂದುಸಾರಿ ಹಳ್ಳಿಯ ಕಡೆ ನೋಡಿದ. ಆಗಲೇ ವ್ಯಾಘ್ರದತ್ತನ ಅನು ಚರರು ಹಳ್ಳಿಗೆ ಕೊಳ್ಳಿಯಿಟ್ಟು, ಅದು ಧಗ ಧಗನೆಂದು ಉರಿಯುತ್ತಿರಲು, ಅವರು ವಿನೋದವಾಗಿ ಕೇಕೇ ಹಾಕುತ್ತಾ ಕುಣಿ ಯುತ್ತಾ ಇದ್ದರು!

ಸಮರಸೇನನು ತನ್ನೊಂದಿಗಿದ್ದ ಮೂವರು ಸೈನಿಕರೊಂದಿಗೆ ವ್ಯಾಘ್ರದತ್ತನ ಕಡೆಯವರ ಮೇಲೆ ಬೀಳುವುದು ಪ್ರಮಾದಕರವೆಂದು ಅರಿತನು. ಮತ್ತು ತಾವು ಅಲ್ಲಿಯೇ ಇನ್ನು ಒಂದು ಕ್ಷಣ ನಿಂತುಕೊಂಡರೂ ಸಹ ಆಪತ್ತಿ ಗೊಳಗಾಗುವುದೂ ಖಂಡಿತ. ಈಗ ತಾನು ತುರ್ತು ಮಾಡಬೇಕಾದ ಕೆಲಸ ಯಾವು ದೆಂದರೆ ಶಿವದತ್ತನನ್ನು ಬೇಟಮಾಡುವುದು. ಆತನಿಂದ ಅರಿತುಕೊಳ್ಳಬಹುದಾದ ರಹಸ್ಯಗ ಳನ್ನು ಕೇಳಿ ತಿಳಿದುಕೊಳ್ಳುವುದು.

ಸಮರಸೇನನು ನಕ್ಷೆಯನ್ನು ಮತ್ತೊಂದು ಸಾರಿ ಪರಿಶೀಲಿಸಿ ನೋಡಿ, ಮುಂದಕ್ಕೆ ಹೆಜ್ಜೆ ಯಿಟ್ಟನು. ಪಟದಲ್ಲಿ ತೋರಿಸಿದ ದಿಕ್ಕಿನ ಕಡೆ ಬೇಗ ಬೇಗ ಕಾಲುಹಾಕಿದರು ಅವರು. ವ್ಯಾಘ್ರದತ್ತನ ಕಡೆಯವರ ಕಣ್ಣಿಗೆ ಬೀಳದಂತೆ ಎಚ್ಚರಿಕೆ ವಹಿಸಬೇಕಾಗಿತ್ತು.

ಸ್ವಲ್ಪದೂರ ಅರಣ್ಯಮಾರ್ಗವಾಗಿ ನಡೆದು ಒಂದು ಬೆಟ್ಟಪ್ರದೇಶವನ್ನು ಸೇರಿಕೊಂಡರು. ಆ ಪ್ರದೇಶವೆಲ್ಲಾ ಬೆಟ್ಟ ಕಣಿವೆಗಳಿಂದ, ಹಳ್ಳತಿಟ್ಟುಗಳಿಂದ ಕೂಡಿದ್ದವು. ಎಷ್ಟೇ ಪ್ರಯತ್ನಪಟ್ಟು ನೋಡಿದರೂ ಸಹ ಕಾಲು ಹಾದಿಯಾಗಲೀ, ಜನನಿವಾಸವಾಗಲೀ ಅಲ್ಲೆಲ್ಲಿಯೂ ಕಾಣಬರಲಿಲ್ಲ.

ಸಮರಸೇನನು ಒಂದು ಎತ್ತರವಾದ ಬೆಟ್ಟವನ್ನು ಹತ್ತಿ ಸುತ್ತಲೂ ಒಂದುಸಾರಿ ನೋಡಿದ. ಬೆಟ್ಟದಡಿಯಲ್ಲಿ ಸಣ್ಣ ಸಣ್ಣ ಕಣಿವೆಗಳು ಅನೇಕವು ಕಾಣಿಸಿದವು. ಒಂದು ಕಡೆ ಮಾತ್ರ ಸ್ವಲ್ಪ ಸಮತಳವಾದ ಪ್ರದೇಶ ಕಂಡುಬಂದಿತು. ಬಹುಶಃ ಅಲ್ಲಿಗೆ ಹೋದರೆ ಅಲ್ಲಿಂದ ಮುಂದೆ ತಾವು ಅನುಸರಿಸಬೇಕಾದ ಮಾರ್ಗವೇನಾದರೂ ತಿಳಿದರೂ ತಿಳಿಯಬಹು ದೆಂದು ಆತನು ಭಾವಿಸಿದ. ಹಾಗೆಯೇ ಸಮರಸೇನನು ಬೆಟ್ಟದಿಂದ ಇಳಿದು





ತನ್ನ ಸಂಗಡಿಗರೊಂದಿಗೆ ಮತ್ತಷ್ಟು ದೂರ ನಡೆದ. ಆ ಪ್ರದೇಶವೆಲ್ಲಾ ಭಾರಿ ಭಾರಿ ಬಂಡೆಗಳಿಂದ, ಸಣ್ಣ ಸಣ್ಣ ಪೊದರುಗಳಿಂದ ಬಹಳ ಭೀಕರವಾಗಿ ಕಾಣಿಸಿತು. ನಕ್ಷೆಯಲ್ಲಿ ತೋರಿಸಿದ್ದ ಪಾಳುಮನೆಗಳಾಗಲೀ, ಅಲ್ಲಿಗೆ ಹೋಗುವ ಮಾರ್ಗವಾಗಲೀ ಸೂಚಿಸುವಂತಹ ಗುರುತುಗಳು ಎಲ್ಲೂ ಕಾಣಿಸಲಿಲ್ಲ.

ಸಮರಸೇನನೂ, ಆತನೊಂದಿಗಿದ್ದ ಮೂವರು ಸೈನಿಕರೂ ಸ್ವಲ್ಪದೂರ ಮುಂದಕ್ಕೆ ನಡೆಯಲು ಅವರಿಗೆ ಭಯಾಶ್ಚರ್ಯವನ್ನು ಉಂಟುಮಾಡುವಂತಹ ಒಂದು ದೃಶ್ಯ ಕಾಣಿಸಿತು. ಎತ್ತರವಾದ ಒಂದು ಬೆಟ್ಟದ ತುದಿಯಿಂದ ಜಲಪಾತವೊಂದು ರಾಕ್ಷಸನ ಬಾಯಿಯಿಂದ ಕೆಳಗೆ ಧುಮುಕುತ್ತಿದೆ! ಬೆಟ್ಟದ ಮೇಲೆ ರಾಕ್ಷಸಾಕಾರದ ತಲೆಯನ್ನು ಅತಿ ಕುಶಲತೆಯಿಂದ ಅಳವಡಿಸಲಾಗಿತ್ತು. ನೋಡುವವರಿಗೆ ಆ ಜಲಪಾತವು ಆ ಭಯಂಕರವಾದ ಶಿರಸ್ಸಿನಲ್ಲಿ ಜನಿಸಿ ಹೊರಗೆ ಬರುತ್ತಿರುವಂತೆ ತೋರುತ್ತಿತ್ತು.

"ಇದು ತುಂಬಾ ಸೋಜಿಗವಾಗಿದೆ. ಈ ಸುತ್ತಮುತ್ತ ಮಾನವರು ಜೀವಿಸುವ ಸೂಚನೆಯೇ ಕಂಡುಬರದು. ಆದರೆ ಈ ಶಿರಸ್ಸು ಮಾನವರಿಂದಲೇ ಕೆತ್ತಲಾಗಿರುವುದೆಂಬ ಮಾತಂತೂ ಖಂಡಿತ'' ಎಂದು ಮನಸ್ಸಿನಲ್ಲೇ ಅಂದುಕೊಂಡ ಸಮರಸೇನ.

ನಾಲ್ವರೂ ಆ ಜಲಪಾತವನ್ನು ನೋಡುತ್ತ ನಿಂತುಬಿಟ್ಟರು. ಜಲಪಾತದ ಹಿಂದೆ ಯಾವುದೋ ಸುರಂಗವಿರುವಂತೆ ತೋರುತಿತ್ತು. ಬಹುಶಃ ಶಿವದತ್ತನು ಅದರ ಮೂಲಕವೇ ತಪ್ಪಿಸಿಕೊಂಡಿರಬಹುದೆಂಬ ಸಂದೇಹ ಮೂಡಿತು ಸಮರಸೇನನಲ್ಲಿ. ಅದು ತುಂಬಾ ಸುರಕ್ಷಿತವಾದ ಮತ್ತು ಸಂಶಯಪಡಲು ಅವಕಾಶವಿಲ್ಲದ ಸ್ಥಳವಾಗಿರಬಹುದೆಂದು ಸಮರಸೇನನು ಭಾವಿಸಿದ.

ಸಮರಸೇನನು ಶಿವದತ್ತನು ಕೊಟ್ಟಿದ್ದ ನಕ್ಷೆಯನ್ನು ಮತ್ತೊಮ್ಮೆ ನೋಡಿದ. ಅದರಲ್ಲಿ ಒಂದು ಕಡೆ ಜಲಪಾತವನ್ನು ಗುರುತಿಸಲಾಗಿತ್ತು. ಅದರಿಂದ ಅವನಿಗೆ ತನ್ನ ಅನು-ಮಾನ ನಿಜವೆಂದು ದೃಢವಾಯಿತು. ತನ್ನ ಸಂಗಡಿಗರೊಂದಿಗೆ ಆತನು ಮೊಣಕಾಲಿನವರೆವಿಗೂ ಇದ್ದ ನೀರಿನಲ್ಲಿ ನಡೆದುಕೊಂಡು, ಜಲಪಾತದ

ಹಿನ್ನೆಲೆಯಲ್ಲಿದ್ದ ಸುರಂಗವನ್ನು ಹೊಕ್ಕನು. ಕೊಂಚದೂರ ಎಲ್ಲವೂ ತಿಮಿರಮಯವಾಗಿತ್ತು. ಅವರು ಧೈರ್ಯವಹಿಸಿ ಮತ್ತಷ್ಟು ದೂರ ನಡೆದರು. ಅವರಿಗೆ ಈಗ ಸ್ವಲ್ಪ ಸ್ವಲ್ಪವಾಗಿ ಬೆಳಕು ಕಾಣಿಸುತಿತ್ತು. ಅಂತೂ ಅವರು ಸುರಂಗದ ಕೊನೆಯನ್ನು ಸೇರಿದರು. ಅಲ್ಲಿ ಅವರಿಗೆ ಸಮತಳವಾದ ಪ್ರದೇಶ ಕಾಣಿಸಿತು. ಆದರೆ ಅದೊಂದು ದೊಡ್ಡ ಹಳ್ಳ. ಸುತ್ತಲೂ ಎತ್ತರವಾದ ಬೆಟ್ಟಗುಡ್ಡಗಳು!

ಸಮರಸೇನ ಮತ್ತಿತರರು ಸುರಂಗದಿಂದ ಹೊರಗೆ ಬಂದಕೂಡಲೇ ಅವರ ಕಣ್ಣಿಗೆ ಮೊದಲು ಕಾಣಿಸಿದುದು ನವಿಲುಗಳ ಗುಂಪು. ಕೆಲವು ನವಿಲುಗಳು ನೃತ್ಯಮಾಡುತ್ತಿದ್ದವು; ಕೆಲವು ಗಾಳಿಯಲ್ಲಿ ಹಾರಾಡುತ್ತ ವಿಚಿತ್ರವಾಗಿ ಸಂತೋಷದಿಂದ ಕೂಗಾಡುತ್ತಿದ್ದವು. ಆ ಪ್ರದೇಶವೆಲ್ಲಾ ನವಿಲುಗಳಿಂದ ಆವರಿಸಲ್ಪಟ್ಟಿತ್ತೆಂದು ಹೇಳಬಹುದು. ಇಂತಹ ಭಾರಿ ನವಿಲುಗಳ ಸಮೂಹವನ್ನು ಸಮರಸೇನನಾಗಲೀ, ಆತನ ಸಂಗಡಿಗರಾಗಲೀ ಎಂದೂ ನೋಡಿರಲಿಲ್ಲ. ಅವರೆಲ್ಲರೂ ವಿಸ್ಮಯ ಹೊಂದಿದರು. ಸ್ವಲ್ಪಹೊತ್ತು ಅವುಗಳ ಆಟಪಾಟಗಳನ್ನು ನೋಡುತ್ತಾ ನಿಂತುಬಿಟ್ಟರು. ಆದರೆ ಸಮರಸೇನನು ಚೇತರಿಸಿಕೊಂಡು ನವಿಲುಗಳ ಅಂದಚಂದಗಳನ್ನು ನೋಡುತ್ತ ನಿಂತರೆ ಕಾರ್ಯ ಕೆಡುವುದೆಂದೂ, ಶಿವದತ್ತನ ಸ್ಥಳವನ್ನು ಮೊದಲು ಕಂಡುಹಿಡಿಯ ಬೇಕೆಂದೂ ತನ್ನ ಸಂಗಡಿಗರನ್ನು ಎಚ್ಚರಿಸಿದನು.

ಅವರು ಮತ್ತಷ್ಟುದೂರ ಮುಂದೆ ಸಾಗಲು ಅವರೊಂದು ಗುಹೆಯನ್ನು ಸಮೀಪಿಸಿದರು. ಹಠಾತ್ತನೆ ಆನೆಯ ಘೀಂಕಾರವು ಅವರಿಗೆ ಕೇಳಿಸಿತು. ಅವರು ಬೆಚ್ಚಿಬಿದ್ದರು. ಎವೆಯಿಕ್ಕುವಷ್ಟರಲ್ಲಿ ಗುಹೆಯಿಂದ ಒಂದು ಆನೆ ಓಡುತ್ತಾ ಹೊರಗೆ ನುಗ್ಗಿತು.

ಇಂತಹ ಸಂಘಟನೆಗೆ ಸಿದ್ಧವಾಗಿರದಿದ್ದ ಸಮರಸೇನನೂ ಆತನ ಸಂಗಡಿಗರೂ ಆನೆ ಪಕ್ಕನೆ ಹಾಗೆ ಹೊರಗೆ ನುಗ್ಗಲು ತಲ್ಲಣಿಸಿ ಹೋದರು; ಭೀತಿಯಿಂದ ಚಲ್ಲಾಪಿಲ್ಲಿಯಾಗಿ ಓಡಿದರು. ಆನೆ ಘೀಂಕಾರ ಮಾಡುತ್ತಾ ಅತ್ತ ಇತ್ತ ಓಡಲಾರಂಭಿಸಿತು.

[ಇನ್ನೂ ಇದೆ]





# ಮೂವರು ತಂಟೆಗಳು



ಒಂದೂರಿನಲ್ಲಿ ತಂಟೆ, ಮಹಾ ತಂಟೆ, ಬಲು ತಂಟೆ ಅಂತ ಮೂವರು ಅಣ್ಣತಮ್ಮಂದಿರಿದ್ದರು. ಅವರು ಕಸಬಿನಿಂದ ಕಳ್ಳರಲ್ಲವಾದರೂ ಚೋರ ವಿದ್ಯೆಯಲ್ಲಿ ನಿಪುಣರಾಗಿದ್ದರು. ಅವರು ತಮ್ಮ ಕೈಚಳಕವನ್ನು ರಾಜನಿಗೆ ತೋರಿಸಬೇಕೆಂದು ನಿರ್ಧರಿಸಿದರು.

ಹಿರಿಯನಾದ ತಂಟೆ ಒಂದು ದಿವಸ ರಾಜನಿಗೆ ಈರೀತಿ ಪತ್ರಬರೆದ:

"ನಾಳೆಯ:ದಿನ ತಮ್ಮ ನಗರಕ್ಕೆ ಬಂದು ಕೊಳ್ಳೆಹೊಡೆಯುತ್ತೇನೆ. ಆದುದರಿಂದ ತಮ್ಮ ನಗರವಾಸಿಗಳೆಲ್ಲರೂ ಜಾಗರೂಕತೆಯಿಂದಿರುವಂತೆ ಎಚ್ಚರಿಕೆ ಕೊಡಿ. ಇಂತು, ತಂಟೆ."

ಕಳ್ಳತನ ಮಾಡುವಾತನು ಮೊದಲೇ ಹೇಳಿ ಮಾಡುತ್ತಾನೆಯೆ? ಯಾರೋ ಹುಡುಗಾಟಕ್ಕಾಗಿ ಹೀಗೆ ಬರೆದಿರಬೇಕು ಎಂದುಕೊಂಡ ರಾಜ. ಆದರೂ ಪ್ರಜೆಗಳನ್ನು ಕಾಪಾಡುವುದು ತನ್ನ ಧರ್ಮವೆಂದೆಣಿಸಿ "ತಂಟೆ ಎಂಬುವನು ನಾಳೆ ನಗರದಲ್ಲಿ ಕಳ್ಳತನ ಮಾಡುತ್ತಾನಂತೆ. ಪುರನಿವಾಸಿಗಳೆಲ್ಲರೂ ಎಚ್ಚರಿಕೆಯಿಂದಿರತಕ್ಕದ್ದು" ಎಂದು ಸಾರಿಸಿದ. ಈ ಸುದ್ದಿ ಕೇಳಿ ಜನರು ತಮ್ಮ ತಮ್ಮ ಆಸ್ತಿಪಾಸ್ತಿ, ವಸ್ತುಗಳನ್ನು ಭದ್ರಪಡಿಸಿಕೊಂಡರು.

ತಿಳಿಸಿದ ಪ್ರಕಾರ ಮಾರನೆಯದಿನ ತಂಟೆ ನಗರವನ್ನು ಸೇರಿದ. ಒಬ್ಬಳು ಅಡುಗೂಲಜ್ಜಿಯ ಮನೆಗೆ ಹೋಗಿ ತನಗೆ ಊಟವನ್ನು ಸಿದ್ಧಗೊಳಿಸುವಂತೆ ಹೇಳಿದ.

"ಈಗಲೇ ಬಾವಿಯಿಂದ ಸೀನೀರು ತಂದು ಅಡಿಗೆ ಮಾಡುತ್ತೇನೆ. ಕುಳಿತಿರಪ್ಪಾ" ಎಂದು ಅಜ್ಜಿ ಕೊಡ ತೆಗೆದುಕೊಂಡು ಹೊರಟಳು. ಅಡಿಗೆಯಾದ ನಂತರ ಊಟಮಾಡುವಾಗ 'ಈ ಊರಿನಲ್ಲಿ ವಿಶೇಷವೇನಾದರೂ ಇದೆಯೇ ಅಜ್ಜಿ?' ಎಂದು ವಿಚಾರಿಸಿದ.

"ಯಾರೋ ತಂಟೆ ಅಂತ ಕಳ್ಳ ಬಂದು ಕೊಳ್ಳೆ ಹೊಡೆಯುವನಂತೆ. ಡಂಗುರ ಹೊಯಿಸಿದರು ಹಾಗೆಂತ. ಹಣವಂತರು ನಡುಗಿ ಸಾಯುತ್ತಿದ್ದಾರೆ" ಎಂದಳು ಅಜ್ಜಿ.

ತಂಟೆ ಊಟಮಾಡಿದ ತರುವಾಯ ಅಜ್ಜಿಗೆ ಒಂದು ರೂಪಾಯಿ ಕೊಟ್ಟ. "ಒಂದು"

ಎಂ. ಎಚ್. ಕಲ್ಯಾಣಮ್ಮ



ಎಂದು ಹೇಳುತ್ತಾ ಅಜ್ಜಿ ಆ ರೂಪಾಯಿ ಯನ್ನು ಮಡಿಕೆಯಲ್ಲಿ ಹಾಕಿದಳು.

ತಂಟೆ ಅಡುಗೂಲಜ್ಜಿಯ ಮನೆಯಿಂದ ಒಂದು ಅಂಗಡಿಗೆ ಹೋದ. ಹೋಗಿ "ಶೆಟ್ಟರೆ ವೀಳೆಯದೆಲೆ ಕಟ್ಟು ಹೇಗೆ ಕೊಡುತ್ತೀರಿ?" ಎಂದು ಶೆಟ್ಟಿಯನ್ನು ಕುರಿತು ಕೇಳಿದ.

"ಬೆಲೆ ತುಂಬಾ ಅಗ್ಗವಾಗಿದೆ. ನಾಲಕ್ಕೇ ಆಣೆ" ಎಂದ ಶೆಟ್ಟಿ. "ಇಗೋ ನಾಲ್ಕಾಣೆ. ಕಟ್ಟಿನಲ್ಲಿ ಇನ್ನೂರಕ್ಕೆ ಒಂದೆಲೆ ಕಡಿಮೆಯಾಗಿದ್ದರೆ ಮುಟ್ಟುವುದಿಲ್ಲ ನಾನು. ಅವಸರಕ್ಕೆ ನನಗೀಗ ಇಪ್ಪತ್ತೈದು ಎಲೆ ಕೊಡಿ. ಉಳಿದುದನ್ನು ಮತ್ತೆ ಬಂದು ತೆಗೆದುಕೊಂಡು ಹೋಗುತ್ತೇನೆ. ನಾನು ಈಗ ಬೇರೆ ಒಂದು ತುರ್ತಾದ ಕೆಲಸಕ್ಕೆ ಹೊರಟಿದ್ದೇನೆ" ಎಂದ ತಂಟೆ.

ಹಣ ಮೊದಲೇ ಕೈಸೇರಿದುದರಿಂದ "ಓ, ಹಾಗೆಯೇ ಆಗಲಿ" ಎಂದು ಕೊಟ್ಟ ಶೆಟ್ಟಿ.

ಅಲ್ಲಿಂದ ತಂಟೆ ಒಬ್ಬ ಬಟ್ಟೆವ್ಯಾಪಾರಿಯ ಬಳಿಗೆ ಹೋದ. "ಒಳ್ಳೆ ಕಾಶ್ಮೀರಿ ಶಾಲುಗಳಿದ್ದರೆ ತೋರಿಸುವಿರಾ?" ಎಂದು ಕೇಳಿದ. ಇನ್ನೂರು ರೂಪಾಯಿ ಬೆಲೆಬಾಳುವ ಶಾಲನ್ನು ಆರಿಸಿದ. ಬಹಳಹೊತ್ತು ಚೌಕಾಸಿ ಮಾಡಿದ ನಂತರ ವರ್ತಕನು ಇಪ್ಪತ್ತೈದು ರೂಪಾಯಿ ಕಡಿಮೆಮಾಡಿ ಕೊಡಲು ಒಪ್ಪಿಕೊಂಡ.

"ನೋಡ್ರಿ, ಊರಲ್ಲಿ ಕಳ್ಳರ ಕಾಟವೆಂದು ಡಂಗುರ ಹೊಯಿಸಿದರು. ಅದರಿಂದ ಹಣವನ್ನು ನನ್ನೊಂದಿಗೆ ತರಲಿಲ್ಲ. ನನ್ನ ಹಣವನ್ನೆಲ್ಲಾ ಶೆಟ್ಟರ ಅಂಗಡಿಯಲ್ಲಿಟ್ಟಿದ್ದೇನೆ. ನನ್ನೊಂದಿಗೆ ನಿಮ್ಮ ಆಳನ್ನು ಕಳುಹಿಸಿಕೊಡಿ. ಹಣ ಕೊಡುತ್ತೇನೆ" ಎಂದ ತಂಟೆ.

ಬಟ್ಟೆವ್ಯಾಪಾರಿ ಶಾಲನ್ನು ತಂಟೆಗೆ ಒಪ್ಪಿಸಿ, ಹಣ ತರಲು ತನ್ನ ತಮ್ಮನನ್ನು ತಂಟೆಯ ಜೊತೆಗೆ ಕಳುಹಿಸಿದ. ತಂಟೆ ಶೆಟ್ಟರಬಳಿಗೆ ಹೋಗಿ "ಶೆಟ್ರೇ, ನಾನು ಹೋಗುತ್ತೇನೆ. ಇವರಿಗೆ ಇಪ್ಪತ್ತೈದು ಕಡಿಮೆ ಇನ್ನೂರು ಕೊಡಿ" ಎಂದ.

"ಅಗತ್ಯವಾಗಿ ಕೊಡುತ್ತೇನೆ ಸ್ವಾಮಿ. ತಾವು ಹೊರಡಿ" ಎಂದು ವೀಳೆಯದೆಲೆ ಕಟ್ಟುಗಳನ್ನು ಹೊರತೆಗೆದ. ತಂಟೆ "ಬರುತ್ತೇನೆ" ಎಂದು ಹೇಳಿ ಅಲ್ಲಿಂದ ಪರಾರಿಯಾದ.

ಶೆಟ್ಟಿ ವೀಳೆಯದೆಲೆಗಳನ್ನು ಒಂದೊಂದಾಗಿ ಎಣಿಸುತ್ತಾ ತನ್ನಕಡೆ ಗಮನ ಕೊಡದಿರುವು

ವನ್ನು ಕಂಡು ಬಟ್ಟೆವ್ಯಾಪಾರಿಯ ತಮ್ಮನಿಗೆ ಬೇಸರಿಕೆಬಂತು. "ಶೆಟ್ಟರೆ, ನನ್ನನ್ನು ಬೇಗ ಕಳುಹಿಸಿಕೊಡಿ. ನನಗೆ ಬೆಟ್ಟದಷ್ಟು ಕೆಲಸ ವಿದೆ" ಎಂದು ಅವಸರಪಡಿಸಿದ.

"ನೋಡಯ್ಯಾ, ನಿನ್ನ ಕೆಲಸತಾನೇ ಮಾಡುತ್ತಿದ್ದೇನೆ" ಎಂದ ಶೆಟ್ಟಿ.

"ಎಲಾ, ವೀಳೆಯಲೆ ಎಣಿಸುತ್ತಾ ನಿನ್ನ ಕೆಲಸ ಮಾಡುತ್ತಿದ್ದೇನೆ ಅಂತ ಸುಳ್ಳು ಹೇಳು ವೆಯಾ?" ಎಂದ ಬಟ್ಟೆವ್ಯಾಪಾರಿಯ ತಮ್ಮ. ಇಬ್ಬರಿಗೂ ಘರ್ಷಣೆಯಾಯಿತು.

"ಆ ಮನುಷ್ಯ ಇಪ್ಪತ್ತೈದು ಕಡಿಮೆ ಇನ್ನೂರು ರೂಪಾಯಿ ನಮಗೆ ಕೊಡಬೇಕು" ಎಂದ ಬಟ್ಟೆವ್ಯಾಪಾರಿಯ ತಮ್ಮ. "ಓಹೋ ನಾನು ಆತನಿಗೆ ಕೊಡಬೇಕಾಗಿರುವದು ಇಪ್ಪತ್ತೈದು ಕಡಿಮೆ ಇನ್ನೂರು ವೀಳ್ಯದೆಲೆ. ರೂಪಾಯಿಗಳನ್ನು ನಾನೆಲ್ಲಿಂದ ತರಲಿ?" ಎಂದ ಅಂಗಡಿಯ ಶೆಟ್ಟಿ.

ಇಬ್ಬರೂ ಕಿತ್ತಾಡುತ್ತಾ ನ್ಯಾಯಕ್ಕಾಗಿ ರಾಜನಲ್ಲಿಗೆ ಹೋದರು. ರಾಜನು ನಡೆದು ದನ್ನೆಲ್ಲಾ ಕೇಳಿ ಇದು ತಂಟೆಯ ಕೆಲಸವೆಂದು ಊಹಿಸಿದ. "ನಷ್ಟವನ್ನು ಇಬ್ಬರೂ ಸಮಾನ ವಾಗಿ ಹಂಚಿಕೊಳ್ಳಿ" ಎಂದು ಸಲಹೆಕೊಟ್ಟ.

ಆ ದಿನವೇ ರಾಜನಿಗೆ ಮತ್ತೊಂದು ಕಾಗದ ಬಂದಿತು. ಆ ಕಾಗದದಲ್ಲಿ ಮಾರನೇಯ ದಿನ ನಗರದಲ್ಲಿ ಕಳ್ಳತನ ಮಾಡುವುದಾಗಿ ಮಹಾತಂಟೆ ಬರೆದಿದ್ದ.

ಈಸಾರಿ ರಾಜನು ಹುಷಾರಾದ. ಮಂತ್ರಿ ಯನ್ನು ಕರೆಯಿಸಿ "ಮಹಾತಂಟೆ ಎಂಬವನು





ನಾಳೆ ನಗರದಲ್ಲಿ ಕಳ್ಳತನ ಮಾಡುವನಂತೆ. ಅವನನ್ನು ಬಂಧಿಸುವ ಕೆಲಸ ನಿಮ್ಮದು" ಎಂದು ಆಜ್ಞಾಪಿಸಿದ.

ಹೇಳಿದಪ್ರಕಾರ ಮಹಾತಂಟೆ ನಗರವನ್ನು ಸೇರಿ ಅಡುಗೂಲಜ್ಜಿ ಮನೆಗೆ ಹೋಗಿ ಅನ್ನ ಇಡುವಂತೆ ಕೇಳಿದ.

ಸೀನೀರು ತರಲು ಮುದುಕಿ ಕೊಡ ತೆಗೆದುಕೊಂಡು ಭಾವಿಯ ಬಳಿಗೆ ಹೊರಟಳು. ಆಗ ಮಹಾತಂಟೆ ಮಡಕೆಯಲ್ಲಿದ್ದ ಒಂದು ರೂಪಾಯಿಯನ್ನು ಅಪಹರಿಸಿದ.

ಅಜ್ಜಿ ವಾಪಸು ಬಂದು ಅಡಿಗೆಮಾಡಿ ಮಹಾತಂಟೆಗೆ ಬಡಿಸಿದಳು. ಊಟಮಾಡುವಾಗ "ಅಜ್ಜೀ, ಏನು ಸಮಾಚಾರ?" ಎಂದು ಕೇಳಿದ.



"ಏನು ಹೇಳಲಪ್ಪಾ. ನಿನ್ನೆ ತಂಟೆ ಎಂಬುವನು ಬಂದು ಇಬ್ಬರು ವರ್ತಕರನ್ನು ಮೋಸಗೊಳಿಸಿದ. ಇಂದು ಮಹಾತಂಟೆ ಎಂಬವ ಬಂದು ಕಳ್ಳತನ ಮಾಡುವನಂತೆ. ಅವನನ್ನು ಹಿಡಿಯಲು ಮಹಾಮಂತ್ರಿಗಳು ಸ್ವತಃ ಪ್ರಯತ್ನಿಸುವರಂತೆ" ಎಂದಳು ಅಜ್ಜಿ.

"ಪಾಪ, ಆ ಮಂತ್ರಿಗೆ ಮಕ್ಕಳು ಮರಿ ಇದ್ದಾರೆಯೋ ಇಲ್ಲವೋ?" ಎಂದು ಕೇಳಿದ ಮಹಾತಂಟೆ.

"ಒಬ್ಬಳೇ ಮಗಳು. ಪಾಪ, ಸಣ್ಣ ವಯಸ್ಸಿನಲ್ಲೇ ಅವಳ ಗಂಡ ದೇಶಾಂತರ ಹೋದ. ತಿರುಗಿ ಬರಲಿಲ್ಲ" ಎಂದಳು ಅಜ್ಜಿ.

ಮಹಾತಂಟೆ ಭೋಜನ ಮುಗಿಸಿ, ಅಜ್ಜಿಗೆ ರೂಪಾಯಿ ಕೊಟ್ಟು ಹೊರಟುಹೋದ. 'ಎರಡು' ಎನ್ನುತ್ತಾ ಅಜ್ಜಿ ಆ ರೂಪಾಯಿಯನ್ನು ಮಡಕೆಯೊಳಕ್ಕೆ ಹಾಕಿದಳು.

ಮಹಾತಂಟೆ ವೇಷ ಬದಲಾಯಿಸಿಕೊಂಡು ನಗರದಲ್ಲಿದ್ದ ಒಂದುಕಡೆ ಕಟ್ಟೆಯ ಬಳಿಯಿದ್ದ ಮರದಕೆಳಗೆ ಕುಳಿತುಕೊಂಡ. ಬಂದು ಹೋಗುವವರಿಗೆಲ್ಲಾ ತಾನು ಮಂತ್ರಿಯ ಅಳಿಯನೆಂದು ಹೇಳತೊಡಗಿದ. ಈ ಸುದ್ಧಿ ಬಹುಬೇಗ ಮಂತ್ರಿಗೂ ತಿಳಿಯಿತು.

ಆತನು ಬಹಳ ಆತುರದಿಂದ, ಬಂದು ಮಹಾತಂಟೆಯನ್ನು ನೋಡಿ ಅಂದು ಪರಾರಿಯಾದ ತನ್ನ ಅಳಿಯನೇ ಬಂದಿರುವನೆಂದು ಆನಂದದಿಂದ ಮನೆಗೆ ಕರೆದುಕೊಂಡುಹೋದ. ಆ ರಾತ್ರಿ ಭೋಜನವಾದ ನಂತರ ಮಂತ್ರಿ

ಕಳ್ಳನನ್ನು ಹಿಡಿಯಲು ಹೊರಡುವುದರಲ್ಲಿದ್ದ. ತಾನೂ ಸಹಾಯಕ್ಕೆ ಬರುವುದಾಗಿ ಹಠ ಹಿಡಿದ ಮಹಾತಂಟೆ. ಮಂತ್ರಿ ಬೇಡವೆಂದರೂ ಕಡೆಗೆ "ಆಗಲಿ" ಎಂದ.

ಮಂತ್ರಿಯ ಮನೆಗೆ ಸಮೀಪದಲ್ಲೇ ಅಪರಾಧಿಗಳನ್ನು ಶಿಕ್ಷಿಸುವ ಯಂತ್ರ ಒಂದಿತ್ತು. ಅದನ್ನು ನೋಡಿ "ಇದೇನು ಮಾವಯ್ಯ?" ಎಂದು ಕೇಳಿದ ಮಹಾತಂಟೆ.

"ಇದರೊಳಗೆ ತಲೆಯನ್ನು ತುರುಕಿಸಿ ಕೀಲನ್ನು ಬಿಗಿಸಿದರೆ ನೋವುಂಟಾಗುವುದು. ಆಗ ಕಳ್ಳರು ಬಾಯಿಬಿಟ್ಟು ನಿಜನುಡಿಯುವರು" ಎಂದ ಮಂತ್ರಿ.

"ನನ್ನ ತಲೆಯನ್ನು ಅದರೊಳಗೆ ಇಡುತ್ತೇನೆ. ಕೀಲು ಬಿಗಿಮಾಡಿ ಮಾವಯ್ಯ." ಎಂದ ಮಹಾ ತಂಟೆ.

"ನಿನಗಷ್ಟು ಮೋಜಾದರೆ ನನ್ನ ತಲೆಯನ್ನಿಡುತ್ತೇನೆ, ನೋಡು" ಎಂದು ಮಂತ್ರಿ ಯಂತ್ರದೊಳಗೆ ತಲೆಯಿಟ್ಟ. ಮಹಾ ತಂಟೆ ಕೀಲನ್ನು ಬಲವಾಗಿ ಬಿಗಿದ.

"ಅಷ್ಟು ಬಿಗಿಸಬಾರದು. ಸಡಿಲಮಾಡು" ಎಂದ ಮಂತ್ರಿ ನೋವನ್ನು ತಾಳಲಾರದೆ.

"ಈ ಕೀಲು ಹಿಂದಕ್ಕೆ ತಿರುಗುತ್ತಿಲ್ಲ. ಏನು ಮಾಡಲಿ ಮಾವಯ್ಯ?" ಎಂದು ಪರದಾಡತೊಡಗಿದ ಮಹಾ ತಂಟೆ. "ಬೇಗ ಮನೆಗೆ ಹೋಗಿ ಅತ್ತೆಯನ್ನು ಕೇಳಿ ಸುತ್ತಿಗೆ ತೆಗೆದುಕೊಂಡು ಬಾ" ಎಂದ ಮಂತ್ರಿ. ಕೂಡಲೇ ಮಹಾತಂಟೆ ಮಂತ್ರಿಯ ಮಡದಿಯ




ಹತ್ತಿರ ಹೋಗಿ "ಅತ್ತೇ, ಅತ್ತೇ. ಕಳ್ಳನು ಮಾವಯ್ಯನನ್ನು ಹಿಡಿದುಕೊಂಡು ತೊಂದರೆ ಪಡಿಸುತ್ತಿದ್ದಾನೆ. ಮನೆಯಲ್ಲಿರುವ ನಗನಾಣ್ಯಗಳನ್ನು ಬೇಗಕೊಡು" ಎಂದು ಕೇಳಿದ.

ಮಂತ್ರಿಯ ಹೆಂಡತಿ ಬೇಗ ಕೊಡದೆ ಏನೇನೋ ಪ್ರಶ್ನೆಹಾಕ ತೊಡಗಿದಳು.

"ಅತ್ತೆ ಕೊಡುವುದಿಲ್ಲವಂತೆ ಮಾವಯ್ಯ" ಎಂದು ಕಿರುಚಿದ ಮಹಾತಂಟೆ.

"ಬೇಗ ಕೊಡೆ, ಪ್ರಾಣಹೋಗುತ್ತಿದೆ" ಎಂದು ಅಬ್ಬರಿಸಿದ ಮಂತ್ರಿ. ಮರುಮಾತನಾಡದೆ ಮಂತ್ರಿಯ ಮಡದಿ ಮನೆಯಲ್ಲಿದ್ದ ನಗನಾಣ್ಯಗಳನ್ನೆಲ್ಲಾ ಮೂಟೆಗಟ್ಟಿ ಕೊಟ್ಟಳು.

ಅದನ್ನು ತೆಗೆದುಕೊಂಡು ಮಹಾತಂಟೆ ತನ್ನದಾರಿಹಿಡಿದ. ಮಾರನೇಯ ದಿವಸ

ಯಾರೋ ದಾರಿಹೋಕರು ಬಂದು ನೋಡಿ ಮಂತ್ರಿಯನ್ನು ಯಂತ್ರದಿಂದ ಬಿಡಿಸಿದರು.

ಆದಿವಸ ಬಲುತಂಟೆಯಿಂದ ರಾಜನಿಗೆ ಮೂರನೇಯ ಪತ್ರ ಬಂತು. ಅದನ್ನು ನೋಡಿದ ಕೂಡಲೇ ರಾಜನು ಕೆರಳಿದ. ಸಾಲಾಗಿ ಎರಡು ಕಳ್ಳತನಗಳನ್ನು ಹೇಳಿಹೇಳಿ ಮಾಡಿದ ಮೂರ್ಖರನ್ನು ಹಿಡಿಯಲಾಗಲಿಲ್ಲ. ಈಸಾರಿ ತಾನೇ ಪ್ರಯತ್ನಪಟ್ಟು, ಈ ದುರುಳನನ್ನು ಹಿಡಿಯಬೇಕೆಂದು ನಿರ್ಧರಿಸಿದ ರಾಜ.

"ಮಾರನೇಯದಿವಸ ಬಲುತಂಟೆ ನಗರ ವನ್ನು ತಲುಪಿದ. ಅಡುಗೂಲಜ್ಜಿ ಮನೆಗೆಹೋಗಿ ಊಟವಿಡುವಂತೆ ಕೇಳಿದ. ಅಜ್ಜಿ ಕೊಡ ತೆಗೆದುಕೊಂಡು ಬಾವಿಗೆ ಹೊರಟಳು. ಆಗ ಬಲುತಂಟೆ ಮಡಕೆಯಲ್ಲಿದ್ದ ರೂಪಾಯಿ ಯನ್ನು ಹಾರಿಸಿ, ಏನೂ ಅರಿಯದವನಂತಿದ್ದ. ಅಡುಗೂಲಜ್ಜಿ ತಿರುಗಿ ಬಂದು, ಅಡಿಗೆಮಾಡಿ, ಬಡಿಸುತ್ತಿರುವಾಗ "ಅಜ್ಜಿ, ಈ ಊರಲ್ಲಿ ಏನು ವಿಶೇಷ?" ಎಂದು ಕೇಳಿದ ಬಲುತಂಟೆ.

"ಏನಿದೆಯಪ್ಪಾ, ಒಂದು ದಿನ ತಂಟೆ ಬಂದು ಕಳ್ಳತನ ಮಾಡಿದ. ಮತ್ತೊಂದು ದಿನ ಮಹಾತಂಟೆ ಮಂತ್ರಿ ಮನೆಗೆ ನುಗ್ಗಿದ. ಇಂದು ಬಲುತಂಟೆ ಅಂತ ಒಬ್ಬ ಬರುವನಂತೆ. ಅವನನ್ನು ಹಿಡಿಯಲು ಮಹಾರಾಜರೇ ನಿಂತಿದ್ದಾರೆ" ಎಂದಳು ಅಜ್ಜಿ.

ಬಲುತಂಟೆ ಅಜ್ಜಿಗೆ ಒಂದು ರೂಪಾಯಿ ಯನ್ನು ಕೊಟ್ಟು ಅಲ್ಲಿಂದ ಹೊರಟ. 'ಮೂರು' ಎಂದು ಹೇಳುತ್ತಾ ಆ ರೂಪಾಯಿಯನ್ನೂ ಮಡಕೆಯಲ್ಲಿ ಹಾಕಿದಳು ಆ ಅಜ್ಜಿ.



ಬಲುತಂಟೆ ಬಗೆಬಗೆಯ ತಿಂಡಿಗಳನ್ನು ಕೊಂಡು ಶ್ಮಶಾನದಬಳಿ ಚಪ್ಪರ ಹಾಕಿ, ಆ ರಾತ್ರಿ ಅಂಗಡಿಯಿಟ್ಟು ದೀಪ ಹಚ್ಚಿ ಕುಳಿತ.

ಆ ರಾತ್ರಿ ಕುದುರೆಯನ್ನು ಹತ್ತಿ ನಗರದಲ್ಲೆಲ್ಲಾ ಪಹರೆ ತಿರುಗುತ್ತಿದ್ದ ರಾಜನು ನಿರ್ಜನವಾದ ಪ್ರದೇಶದಲ್ಲಿದ್ದ ಬೆಳಕನ್ನು ಕಂಡು ಅಲ್ಲಿಗೆ ಬಂದ. "ಈ ಹೊತ್ತಿನಲ್ಲಿ ಇಂತಹ ಸ್ಥಳದಲ್ಲಿ ಅಂಗಡಿ ಏಕೆ ಇಟ್ಟಿರುವೆ? ಯಾರು ಬರುತ್ತಾರೆ?' ಎಂದು ಕೇಳಿದ ರಾಜ ತನ್ನ ಕುತೂಹಲ ತಡೆಯಲಾರದೆ.

"ಸ್ವಾಮಿ ಕಳ್ಳಕಾರರು ಬಂದು ತಿಂಡಿ ತಿನಸುಗಳನ್ನು ಕೊಂಡುಕೊಂಡು ಕೈತುಂಬಾ ಕಾಸು ಕೊಡುತ್ತಾರೆ. ಅವರು ಬರುವ ಸಮಯವಾಯಿತು. ನೀವು ಇಲ್ಲಿಂದ ದಯಮಾಡಿ. ಸ್ವಾಮಿ, ನಾನು ಬಡವ. ನಾಲ್ಕು ಕಾಸು ಸಂಪಾದಿಸಿಕೊಳ್ಳಲು ಅವಕಾಶ ಕೊಡಿ" ಎಂದ ಬಲುತಂಟೆ.

"ನಿನಗೆ ನಾನು ಅವರು ಕೊಡುವ ಹಣದ ಹತ್ತರಷ್ಟು ಬೇಕಾದರೆ ಕೊಡುವೆನು. ನಾನು ಬಚ್ಚಿಟ್ಟುಕೊಳ್ಳಲು ಸ್ವಲ್ಪ ಸ್ಥಳ ಮಾಡಿ ಕೊಡು" ಎಂದ ರಾಜ.

"ಇಲ್ಲಿ ಅವಿತಿಟ್ಟುಕೊಳ್ಳಲು ಸ್ಥಳವಾದರೂ ಎಲ್ಲಿದೆ? ಬೇಕಾದರೆ ಈ ಚೀಲದಲ್ಲಿ ಕುಳಿತುಕೊಳ್ಳಿ. ಚೀಲದ ಬಾಯಿ ಕಟ್ಟಿಬಿಡುತ್ತೇನೆ. ಕಳ್ಳರಿಗೆ ಗೊತ್ತಾಗುವುದಿಲ್ಲ" ಎಂದ ಬಲುತಂಟೆ. ರಾಜನಿಗೆ ಬೇರೆ ಉಪಾಯ ಕಾಣಲಿಲ್ಲ. ನಲುಗಿಹೋಗಬಾರದೆಂದು




ರಾಜನು ತನ್ನ ಉಡುಪು, ಪೇಟ ಮತ್ತು ಕತ್ತಿಗಳನ್ನು ತೆಗೆದು ಒಂದುಕಡೆಗಿಟ್ಟ. ಬಳಿಕ ಚೀಲದೊಳಕ್ಕೆ ಸೇರಿಕೊಂಡ. ಸಮಯ ಸಾಧಿಸಿ ಬಲುತಂಟೆ ಚೀಲದ ಬಾಯಿಯನ್ನು ಭದ್ರವಾಗಿ ಬಿಗಿದು ಕಟ್ಟಿಹಾಕಿಬಿಟ್ಟ.

"ಅಯ್ಯಾ ಕಳ್ಳರು ಬರುವಂತಿದೆ. ನಾನು ನಿಮ್ಮ ಕುದುರೆಯನ್ನು ಮರೆಯಲ್ಲಿ ಕಟ್ಟಿ ಬರುತ್ತೇನೆ. ಸದ್ದು ಮಾಡಬೇಡಿರಿ" ಎಂದು ಹೇಳಿ ಬಲುತಂಟೆ ರಾಜನ ದಿರುಸು, ಪೇಟಾ ಮತ್ತು ಕತ್ತಿಗಳ ಸಮೇತ ಕುದುರೆಯೊಂದಿಗೆ ಸ್ವಲ್ಪ ದೂರ ಹೋಗಿ ಅಲ್ಲಿ ಅವುಗಳನ್ನು ಹಾಕಿಕೊಂಡ. ಅನಂತರ ಕುದುರೆಯನ್ನು ಹತ್ತಿ ನೇರವಾಗಿ ಖಜಾನೆಗೆ ಹೊರಟ. ಅಲ್ಲಿ "ಭಟರೆ, ಬಲುತಂಟೆ ಖಜಾನೆಯನ್ನು ಲೂಟಿ

ಮಾಡುವನಂತೆ. ಆದುದರಿಂದ ಒಳಗಿರುವ ಹಣವನ್ನೆಲ್ಲಾ ಮೂಟೆಕಟ್ಟಿ ತನ್ನಿ" ಎಂದ ಬಲುತಂಟೆ ತನ್ನ ಧ್ವನಿಯನ್ನು ಬದಲಾಯಿಸಿ.

ಅವನು ಹೇಳಿದಪ್ರಕಾರ ಮಾಡಿದರು ನೌಕರರು. ಖಜಾನೆಯಲ್ಲಿರುವ ಹಣವನ್ನೆಲ್ಲಾ ದೋಚಿಕೊಂಡು ಮಾಯವಾದ ಬಲುತಂಟೆ. ಮಾರನೇಯದಿನ ತುಂಬಾ ಹೊತ್ತಾದನಂತರ ಪ್ರಯಾಣಿಕರು ಯಾರೋ ರಾಜನನ್ನು ಚೀಲದಿಂದ ಬಿಡಿಸಿದರು.

ಎಚ್ಚರಿಕೆ ಕೊಟ್ಟು ತುಡುಗುಮಾಡಿದ ಈ ಕಳ್ಳರನ್ನು ಹಿಡಿಯಲು ರಾಜನು ಅದೆಷ್ಟೋ ಪ್ರಯತ್ನಮಾಡಿದ. ಆದರೆ ಅವರು ಸಿಗಲಿಲ್ಲ. ಒಂದು ದಿನ ಅನಿರೀಕ್ಷಿತವಾಗಿ ಆ ಮೂವರು ತಂಟೆಗಳು ತಾವಾಗಿಯೆ ರಾಜನನ್ನು ಕಾಣಲು ಅರಮನೆಯ ಆಸ್ಥಾನಕ್ಕೆ ಬಂದರು.

"ಯಾರು ನೀವು ?" ಎಂದು ಕೇಳಿದ ರಾಜ.

ಅವರು ತಮ್ಮ ತಮ್ಮ ಹೆಸರು ಹೇಳಿದರು. ರಾಜನು ಕುಪಿತನಾದ. ಅವರನ್ನು ಬಂಧಿಸಲು ಭಟರಿಗೆ ಆಜ್ಞೆಯಿತ್ತ. "ಅವಸರಪಡಬೇಡಿ ಪ್ರಭು, ಸ್ವಲ್ಪ ಯೋಚಿಸಿ ನೋಡಬೇಕು. ನಾವು ವಸ್ತುತಃ ಕಳ್ಳರಲ್ಲ. ಚೋರವಿದ್ಯಾ ಪ್ರವೀಣರು. ನಮ್ಮ ವಿದ್ಯೆಯನ್ನು ಪ್ರಭುಗಳಿಗೆ ತೋರಿಸಿ ಬಹುಮಾನ ಹೊಂದಲು ಬಂದೆವು. ನಾವು ಕಳವುಮಾಡಿದ ಮಾಲನ್ನು ಆಯಾ ಮಾಲೀಕರಿಗೆ ವಾಪಸುಮಾಡುತ್ತೇವೆ" ಎಂದರು ಆ ಸಹೋದರರು.

ರಾಜನ ಹಣ ರಾಜನಿಗೆ, ಮಂತ್ರಿಯ ಆಸ್ತಿ ಮಂತ್ರಿಗೆ, ಶಾಲುವನ್ನು ವರ್ತಕನಿಗೆ, ಎರಡು ರೂಪಾಯಿಗಳನ್ನು ಅಜ್ಜಿಗೆ ವಾಪಸು ಕೊಟ್ಟು ಬಿಟ್ಟರು ಮೂವರು ತಂಟೆಗಳು.

ರಾಜನು ಸಂತೋಷಗೊಂಡು ನಿಮಗೇನು ಬೇಕು ?" ಎಂದು ಕೇಳಿದ.

"ಸ್ವಾಮಿ, ನಮಗೆ ನಿಮ್ಮ ಆಸ್ಥಾನದಲ್ಲಿ ಕೆಲಸ ಕೊಡಬೇಕಾಗಿ ಪ್ರಾರ್ಥನೆ. ಅದೇ ನಮಗೆ ಬಹುಮಾನ" ಎಂದು ನುಡಿದರು ಆ ಚೋರವಿದ್ಯಾಪ್ರವೀಣರು.

ಅವರ ಕೋರಿಕೆಯಂತೆ ರಾಜನು ಅವರೆಲ್ಲರಿಗೂ ಆಸ್ಥಾನದಲ್ಲಿ ಉದ್ಯೋಗವನ್ನು ಕಲ್ಪಿಸಿ ಕೊಟ್ಟು, ಆದರದಿಂದ ನೋಡಿಕೊಳ್ಳುತ್ತಿದ್ದನು. ಅವರೂ ಒಳ್ಳೆಯವರಾಗಿದ್ದರು.





# ಚಂದ್ರಹಾರ

ಒಂದೂರಿನಲ್ಲಿ ಕಾಸಿನಕಾಳಪ್ಪ ಎಂಬ ಒಬ್ಬ ಲೋಭಿಯಿದ್ದನು. ಆತನ ಹೆಂಡತಿ ಸುಂದರಮ್ಮ ಬಲು ಚೆಲುವೆ. ಸುಖವಾಗಿ ಜೀವನ ನಡೆಸಲು ಸಾಕಷ್ಟು ಹಣವಿದ್ದರೂ ಸಹ ಕಾಳಪ್ಪ ಬಡವನಂತೆ ಬಾಳನ್ನು ಸಾಗಿಸುತ್ತಿದ್ದ. ಕಾಸಿಗೆ ಕಾಸು ಕೂಡಿಹಾಕುತ್ತಿದ್ದ. ಹೆಂಡತಿಗೆ ಒಂದು ಒಡವೆಯನ್ನಾದರೂ ಮಾಡಿಸಿ ಕೊಟ್ಟಿರಲಿಲ್ಲ.

ಒಂದು ದಿನ ನೆರೆಮನೆ ದುರ್ಗಪ್ಪ ತನ್ನ ಹೆಂಡತಿಗೆ ಐನೂರು ರೂಪಾಯಿ ಹಾಕಿ ಒಂದು ಚಂದ್ರಹಾರನ್ನು ಮಾಡಿಸಿಕೊಟ್ಟ. ಆಕೆ ಆ ಚಂದ್ರಹಾರವನ್ನು ಹಾಕಿಕೊಂಡು ತೋರಿಸಿ ಬರಲು ಎಲ್ಲರ ಮನೆಗೂ ಹೋದಳು. ಹಾಗೇ ಸುಂದರಮ್ಮನ ಮನೆಗೂ ಹೋದಳು. ಆ ಚಂದ್ರಹಾರವನ್ನು ನೋಡಿದಾಗಲಿಂದ ಸುಂದರಮ್ಮನಿಗೆ ನಿದ್ರೆಹಿಡಿಯಲಿಲ್ಲ. ಅಂತಹ ಚಂದ್ರಹಾರವನ್ನು ತನಗೂ ಸಹ ಕೊಂಡು ಕೊಡಬೇಕೆಂದು ಗಂಡನ ಹತ್ತಿರ ಹಠಹಿಡಿದಳು.

"ಯಾಕೇ ಅದು. ಹಣ ದಂಡ. ಹೊಟ್ಟೆಗಲ್ಲ, ಬಟ್ಟೆಗಲ್ಲ, ಐನೂರು ರೂಪಾಯಿ! ಅದೇ ಹಣಕ್ಕೆ ಒಂದು ಎಕರೆ ನೆಲ, ಎರಡು ಜೊತೆ ಎತ್ತುಗಳು ಬರುತ್ತವೆ" ಎಂದ ಕಾಳಪ್ಪ.

"ಸಾಕು ಸುಮ್ಮನಿರಿ. ದುರ್ಗಪ್ಪ ನಮಗಿಂತ ಸಾಹುಕಾರನೇನಲ್ಲ. ನಮಗೆ ಮಕ್ಕಳು ಮರಿಯೂ ಇಲ್ಲ. ಆದರೆ ಅವರಿಗೆ ನಾಲ್ಕು ಮಕ್ಕಳಿದ್ದಾರೆ. ದುರ್ಗಪ್ಪನ ಹೆಂಡತಿ ಮಂಗನಂತಿದ್ದಾಳೆ. ಅದರೂ ಆತ ತನ್ನ ಮಡದಿಗೆ ಚಂದ್ರಹಾರ ಮಾಡಿಸಿಕೊಟ್ಟಿದ್ದಾನೆ. ನನಗೆ ನೀವು ಒಂದು ಮೂಗುತಿಯನ್ನಾದರೂ ಮಾಡಿಸಿಕೊಟ್ಟಿಲ್ಲ" ಎಂದಳು ಸುಂದರಮ್ಮ.

ಕಾಳಪ್ಪನಿಗೆ ಕೋಪ ಬಂತು. ದುರ್ಗಪ್ಪನನ್ನು ಬಾಯಿಗೆ ಬಂದಂತೆ ಬಯ್ದ. "ದುರ್ಗಪ್ಪ ಮೈಮೇಲೆ ಜ್ಞಾನವಿಲ್ಲದೆ ಹಣ ಪೋಲು ಮಾಡುವುದಲ್ಲದೆ ನೆರೆಹೊರೆಯವರ ಸಂಸಾರಗಳನ್ನೂ ಸಹ ಹಾಳುಮಾಡುತ್ತಿದ್ದಾನೆ" ಎಂದು ರೇಗಾಡಿದ. ಹೆಂಡತಿ ಬೇಡಿಬಯಸಿದ ಚಂದ್ರಹಾರವನ್ನು ಕೊಂಡು

ಡಿ. ಮಹಾಬಲರಾವ್

ಕೊಡಲು ಸುತರಾಂ ಒಪ್ಪಲೇ ಇಲ್ಲ. ಕಡೆಗೆ ತನ್ನ ಕೊರಳಲ್ಲಿ ಚಂದ್ರಹಾರವನ್ನು ಕಂಡು ಗಂಡನು ಮೆತ್ತಗಾಗಬಹುದೆಂದು ಸುಂದರಮ್ಮ ಒಂದು ದಿನ ದುರ್ಗಪ್ಪನ ಹೆಂಡತಿಯಿಂದ ಹಾರವನ್ನು ಎರವಲು ಪಡೆದು, ಕೊರಳಿಗೆ ಹಾಕಿಕೊಂಡು, ಗಂಡನ ಬಳಿಗೆ ಬಂದು "ಏನೂಂದ್ರೆ, ಹೇಗಿದೆ?" ಎಂದು ಕೇಳಿದಳು ತುಂಟನಗೆ ಬೀರುತ್ತಾ.

ಕಾಳಪ್ಪ ತನ್ನ ಹೆಂಡತಿಯನ್ನು ಒಂದು ಬಾರಿ ದೃಷ್ಟಿಸಿ ನೋಡಿ ಕ್ಷಣಹೊತ್ತು ಆನಂದ ತುಂದಿಲನಾದನು. ಆದರೆ ಎಲ್ಲಿ ತನ್ನನ್ನು ಚಂದ್ರಹಾರ ಕೊಡಿಸುವಂತೆ ಗಲಾಟೆಮಾಡುವಳೋ ಎಂಬ ಭಯದಿಂದ "ಬಹಳ ಚೆನ್ನಾಗಿದೆ. ಅಷ್ಟು ಬೆಲೆಬಾಳುವ ಒಡವೆ ನಮಗೇಕೆ? ಕಳ್ಳಕಾರರು ಎತ್ತಿಕೊಂಡು ಹೋದಾರು. ಬೇಗ ಹೋಗಿ ಅವರಿಗೆ ಒಪ್ಪಿಸಿಬಿಡು" ಎಂದ ಕಾಳಪ್ಪ.

"ನನಗೀಗ ಬೆಟ್ಟದಷ್ಟು ಕೆಲಸವಿದೆ. ನಾಳೆಬೆಳಗ್ಗೆ ಕೊಡುತ್ತೇನೆ ಬಿಡಿ" ಎಂದು ಬೇಸರದಿಂದ ಮುಖ ಗಂಟುಹಾಕಿಕೊಂಡು ಹೇಳಿದಳು ಸುಂದರಮ್ಮ.

ಅಂದುರಾತ್ರಿ ಕಳೆದುಹೋಯಿತು. ಬೆಳಗಾದಕೂಡಲೇ ಸುಂದರಮ್ಮ ಗಂಡನ ಬಳಿ ಬಂದು, "ಏನೂಂದ್ರೆ ನೀವೇನಾದರೂ ನಡುರಾತ್ರಿ ಹಿತ್ತಲ ಬಾಗಿಲು ತೆಗೆದದ್ದುಂಟೇ?" ಎಂದು ಕೇಳಿದಳು.

"ಇಲ್ಲವಲ್ಲಾ. ಕಳ್ಳರೇನು ಮನೆಯೊಳಗೆ ನುಗ್ಗಲಿಲ್ಲವಷ್ಟೇ? ಅವರ ಚಂದ್ರಹಾರ



ಕೊಟ್ಟುಬಿಟ್ಟೆಯೇನೇ? ಏನಾದರೂ ಕಳೆದು ಹೋಗಿದೆಯೇನೋ ನೋಡು" ಎಂದ ಭಯಸಂಶಯದಿಂದ ಕಾಳಪ್ಪ.

"ಚಂದ್ರಹಾರವನ್ನು ಕುಂಕುಮದ ಪೆಟ್ಟಿಗೆಯಲ್ಲಿಟ್ಟದ್ದೇನೆ ಬಿಡಿ. ಮನೆಯಲ್ಲಿ ಏನೂ ಕಳವಾದಂತೆ ಕಾಣಿಸದು" ಎಂದು ಹೇಳುತ್ತ ಸುಂದರಮ್ಮ ಕುಂಕುಮದ ಪೆಟ್ಟಿಗೆಯನ್ನು ತೆಗೆದು ನೋಡಿದಳು. ನೋಡಿದರೆ ಏನಿದೆ? ಅದರಲ್ಲಿ ಚಂದ್ರಹಾರ ಇರಲಿಲ್ಲ.

ಸರಿ, ಸುಂದರಮ್ಮ ಗೊಳೋ ಎಂದು ರಾಗ ತೆಗೆದಳು. ಕಾಳಪ್ಪನಿಗೆ ಪ್ರಾಣವೇ ಹಾರಿ ಹೋದ ಹಾಗಾಯಿತು.

"ಬುದ್ಧಿಹೀನಳೇ, ಅಷ್ಟೊಂದು ಬೆಲೆ ಬಾಳುವ ವಸ್ತುವನ್ನು ಆಗಲೇ ಹಿಂದಕ್ಕೆ ಕೊಡಬೇಡವೇ? ಈಗ ಐನೂರು ರೂಪಾಯಿ ಸುರಿದು ಒಡವೆಮಾಡಿಸಿ ಅವರಿಗೆ ಕೊಡಬೇಕಾಯಿತಲ್ಲಾ, ಏನು ಮಾಡಲಿ?" ಎಂದು ತಲೆಚಚ್ಚಿಕೊಂಡ ಕಾಳಪ್ಪ.

"ನೀವು ಹಿತ್ತಲು ಬಾಗಿಲು ಮುಚ್ಚದೆ ಮಲಗುವಿರೆಂದು ನಾನೇನಾದರೂ ಕನಸು ಕಂಡಿದ್ದೆನೆ?" ಎಂದಳು ಸುಂದರಮ್ಮ. "ನಾನು ಬಾಗಿಲು ತೆಗೆದಂತೆ ನನಗೆ ಜ್ಞಾಪಕವಿಲ್ಲ" ಎಂದ ಗಂಡ. "ಎಲ್ಲೋ ನಿದ್ದೆ ಮಂಪರದಲ್ಲಿ ನೀವೇ ಬಾಗಿಲು ತೆಗೆದಿರಬೇಕು" ಎಂದು ಸಾಧಿಸಿದಳು ಸುಂದರಮ್ಮ.

ಕಾಳಪ್ಪ ಐನೂರು ರೂಪಾಯಿ ಖರ್ಚು ಮಾಡಿ ಚಂದ್ರಹಾರವನ್ನು ಮಾಡಿಸಲೇ ಬೇಕಾಯಿತು. ಅದನ್ನು ತಂದು ಹೆಂಡತಿಯ ಕೈಗೆ ಕೊಡುತ್ತಾ "ಲೇ, ತಕ್ಷಣ ಇದನ್ನು ದುರ್ಗಪ್ಪನ ಹೆಂಡತಿಗೆ ಕೊಟ್ಟುಬಿಟ್ಟು ಬಾ. ಹಿಂದೆ ಆದ ಶಿಕ್ಷೆ ಸಾಕು" ಎಂದು ಅವಸರ ಪಡಿಸಿದ. ಸುಂದರಮ್ಮ ಕುಲುಕುಲು ನಗುತ್ತಾ ಆ ಹಾರವನ್ನು ಕೊರಳಿಗೆ ಹಾಕಿಕೊಂಡು "ಇದು ನಮ್ಮದೆ ಬಿಡಿ. ನಾನು ಚಂದ್ರಹಾರವನ್ನು ಕುಂಕುಮದ ಪೆಟ್ಟಿಗೆಯಲ್ಲಿಟ್ಟಿರಲಿಲ್ಲ; ಕರಡಿಗೆಯಲ್ಲಿಟ್ಟು ಮರೆತುಬಿಟ್ಟಿದ್ದೆ. ಅದು ಕಾಣಿಸಿದಕೂಡಲೇ ಅಂದೇ ದುರ್ಗಪ್ಪನವರ ಹೆಂಡತಿಗೆ ಒಪ್ಪಿಸಿಬಿಟ್ಟೆ" ಎಂದಳು.

ಹೆಂಡತಿಯ ಗಡಸುತನಕ್ಕೆ ಕಾಳಪ್ಪ ಬೆರಗಾಗಿ ಹೆಚ್ಚಿಗೆ ಮಾತನಾಡಲಿಲ್ಲ.






ಬ್ರಹ್ಮದತ್ತನು ಕಾಶೀರಾಜ್ಯವನ್ನು ಆಳುತ್ತಿದ್ದಾಗ ಬೋಧಿಸತ್ವನು ಒಂದುಸಾರಿ ನವಿಲಿನ ಜನ್ಮ ತಾಳಿದನು. ಆ ನವಿಲು ಸರ್ವ ಸಾಧಾರಣ ನವಿಲುಗಳಂತಹುದಲ್ಲ. ಅದೊಂದು ಅಪೂರ್ವವಾದ ಹೊಂಬಣ್ಣದ ನವಿಲು. ಅದು ದಂಡಕಾರಣ್ಯದಲ್ಲಿ ಓಡಾಡಿಕೊಂಡಿತ್ತು.

ಒಂದು ದಿನ ಕಾಶಿರಾಜನ ಪತ್ನಿಯರಲ್ಲೊಬ್ಬಾಕೆಗೆ ಹೊಂಬಣ್ಣದ ನವಿಲು ಕನಸಿನಲ್ಲಿ ಕಾಣಿಸಿತು. ಅಂತಹುದನ್ನು ತರಿಸಿಕೊಡಬೇಕೆಂದು ಆಕೆ ಗಂಡನನ್ನು ಪೀಡಿಸಿದಳು. ರಾಜನು ಮಂತ್ರಿಯನ್ನು ಕೇಳಿದ. ಆತನು ಬ್ರಾಹ್ಮಣರು ಆ ವಿಷಯ ಬಲ್ಲರೆಂದ. ಬ್ರಾಹ್ಮಣರು ಬೇಟೆಗಾರರಿಗೆ ತಿಳಿದಿರಬಹುದೆಂದು ಹೇಳಿದರು. ರಾಜನು ಒಬ್ಬ ಬೇಟೆಗಾರನನ್ನು ಬರಮಾಡಿಕೊಂಡು "ಹೊಂಬಣ್ಣದ ನವಿಲನ್ನು ಜೀವಸಹಿತ ಹಿಡಿದುತಂದರೆ ಭಾರಿ ಬಹುಮಾನ ಕೊಡುತ್ತೇನೆ" ಎಂದ. ಆ ಬೇಟಗಾರನು ಏಳು ವರ್ಷ ಹೊಂಚು ಹಾಕಿದರೂ, ಆ ನವಿಲು ಬಲೆಯಲ್ಲಿ ಬೀಳಲಿಲ್ಲ. ಈಮಧ್ಯೆ ಆ ಬೇಟೆಗಾರನೂ ನವಿಲನ್ನು ಬಯಸಿದ ಆ ರಾಣಿಯೂ ತೀರಿಕೊಂಡರು.

'ಕನಸಿನಲ್ಲಿ ಕಾಣಿಸಿದ ಕೇವಲ ಒಂದು ನವಿಲಿಗಾಗಿ ಹಂಬಲಿಸುತ್ತಾ ನನ್ನ ರಾಣಿ ಸಾಯುವುದೆಂದರೇನು?' ಎಂದು ರಾಜನಿಗೆ ಕೋಪ ಬಂತು. ಆಗ ಆತನು ದಂಡಕಾರಣ್ಯದಲ್ಲಿ ಹೊಂಬಣ್ಣದ ನವಿಲೊಂದು ಓಡಾಡಿಕೊಂಡಿರುವುದೆಂತಲೂ, ಅದರ ಮಾಂಸವನ್ನು ತಿಂದವರಿಗೆ ಸಾವು ನೋವುಗಳಿರುವುದಿಲ್ಲವೆಂತಲೂ ಒಂದು ಪ್ರಕಟನೆಯನ್ನು ಮಹಾದ್ವಾರದ ಮುಂದೆ ನೇತುಹಾಕಿಸಿದ.

ಆ ರಾಜನನಂತರ ಚಿನ್ನದಬಣ್ಣದ ನವಿಲನ್ನು ತರುವ ಪ್ರಯತ್ನದಲ್ಲಿಯೇ ಆರು ತಲೆಮಾರುಗಳು ಕಳೆದುಹೋದವು. ಏಳನೆಯವನಿಗೆಮಾತ್ರ ಅದು ದಕ್ಕಿತು. ಅವನು ಕಳುಹಿಸಿದ ಬೇಟೆಗಾರನು ಬಹು ಯುಕ್ತಿಯಿಂದ ಆ ನವಿಲನ್ನು ಹಿಡಿದುತಂದು ರಾಜನಿಗೆ ಒಪ್ಪಿಸಿದ.

ಆ ನವಿಲನ್ನು ನೋಡಿದಾಕ್ಷಣ ರಾಜನಿಗೆ ಅಮಿತಾಶ್ಚರ್ಯವೂ ಪೂಜ್ಯಾಭಾವವೂ

ಯಚ್. ನಾರಾಯಣರಾವ್

ಉಂಟಾಯಿತು. ತನ್ನ ಸಿಂಹಾಸನದ ಪಕ್ಕದಲ್ಲಿಯೇ ಆ ಮಯೂರಕ್ಕಾಗಿ ಒಂದು ಉಚಿತಾಸನವನ್ನು ಹಾಕಿಸಿದ. ನವಿಲಿನ ರೂಪದಲ್ಲಿದ್ದ ಬೋಧಿಸತ್ವನು ರಾಜನನ್ನು ಕುರಿತು "ಎಲೈ ರಾಜನೇ, ನನ್ನನ್ನು ಹೀಗೆ ಬಂಧಿಸಲು ಕಾರಣವೇನು?" ಎಂದು ಕೇಳಿದ.

ನಿನ್ನ ಮಾಂಸವನ್ನು ತಿಂದರೆ ಸಾವು ನೋವುಗಳಿರುವುದಿಲ್ಲವೆಂದು ಹೇಳುತ್ತಿರುವರು" ಎಂದ ರಾಜ. "ಅಂದರೆ ನನ್ನನ್ನು ಕೊಲ್ಲಲು ನಿರ್ಧರಿಸಿದಂತಾಯಿತು," ಎಂದು ಗಂಭೀರವಾಗಿ ನುಡಿದ ಬೋಧಿಸತ್ವ.

"ಹೌದು" ರಾಜನ ಉತ್ತರವಿದು.

"ಹುಚ್ಚನೇ! ನನಗೇ ಮರಣಸಂಭವಿಸುವಾಗ ನನ್ನ ಮಾಂಸವನ್ನು ತಿನ್ನುವವರಿಗೆ ಮರಣ ಸಂಭವಿಸುವುದಿಲ್ಲವೆಂದರೇನು? ಇದರಲ್ಲಿ ಏನಾದರೂ ಅರ್ಥವಿದೆಯೇ?" ಎಂದು ಕೇಳಿದ ಬೋಧಿಸತ್ವ.

"ನಿನ್ನದು ಹೊಂಬಣ್ಣದ ಶರೀರ. ಆದುದರಿಂದ ನಿನ್ನ ಮಾಂಸವನ್ನು ತಿಂದವರಿಗೆ ಆ ಬಣ್ಣ ಬರುವುದೆಂದೂ, ಅವರಿಗೆ ಸಾವೇ ಇರಲಾರದೆಂದೂ ಹೇಳುತ್ತಿರುವರು," ಎಂದು ರಾಜನು ತುಸ ವಿವರವಾಗಿ ಹೇಳಿದ.

"ರಾಜನೇ, ನಾನು ಹೀಗಿರಲು ಕಾರಣ ಹೇಳುವೆನು ಕೇಳು. ಪೂರ್ವಕಾಲದಲ್ಲಿ ಒಮ್ಮೆ ನಾನು ಇದೇ ರಾಜ್ಯಕ್ಕೆ ಮಹಾರಾಜನಾಗಿದ್ದೆ. ನ್ಯಾಯವಾಗಿ ರಾಜ್ಯವನ್ನಾಳಿ, ಧರ್ಮಸ್ಥಾಪನೆ ಮಾಡಿದೆ. ಆದುದರಿಂದ ನಾನು ಈ ಜನ್ಮದಲ್ಲಿ ಹೊಂಬಣ್ಣದ ನವಿಲಾಗಿ ಜನಿಸಿರುವೆನು," ಎಂದು ಹೇಳಿದ ಬೋಧಿಸತ್ವ. ಕಾಶೀರಾಜನು ವಿಸ್ಮಯಗೊಂಡನು. "ಏನು! ಧರ್ಮವಾಗಿ ಆಳಿದುದಕ್ಕೆ ಈ ಫಲವೇ? ನಿನ್ನ ಮಾತನ್ನು ನಂಬುವುದು ಹೇಗೆ?"

"ಆಗ ನಾನೊಂದು ದಿವ್ಯರಥದಲ್ಲಿ ವಿಹರಿಸುತ್ತಿದ್ದೆ. ಈಗ ಅದು ರಾಜೋದ್ಯಾನದಲ್ಲಿರುವ ಕೊಳದಬಳಿ ಹೂತುಹೋಗಿದೆ. ಅಗೆಯಿಸಿ ನೋಡಿ" ಎಂದ.

ಆಪ್ರಕಾರವೇ ಅಗೆಯಿಸಿ ನೋಡಲು ದಿವ್ಯರಥವೊಂದು ಕಾಣಿಸಿತು. ಅಂದಿನಿಂದ ರಾಜನು ಬೋಧಿಸತ್ವನನ್ನು ತನ್ನ ಗುರುವಿನಂತೆ ಕಾಣುತ್ತಾ ಬಂದನು.





# ಯುಕ್ತಿವಂತ

ಹಿಂದೆ ಕಾಶ್ಮೀರದ ದೇಶವನ್ನು ಅವಂತಿ ಶರ್ಮನು ಆಳುತ್ತಿದ್ದ ಕಾಲದಲ್ಲಿ ಪ್ರತಿ ವರ್ಷವೂ ಕ್ಷಾಮ ಸಂಭವಿಸುತಿತ್ತು. ಜನರು ಅನ್ನನೀರಿಲ್ಲದೇ ಕಷ್ಟಪಡುತ್ತಿದ್ದರು.

ಕಾಶ್ಮೀರ್ ಎತ್ತರವಾದ ಪರ್ವತಗಳ ನಡುವೆ ಇರುವ ಪ್ರದೇಶ. ಅಲ್ಲಿಯ ನದಿಗಳು ಪರ್ವತಗಳಲ್ಲಿ ಹುಟ್ಟಿ ತುಂಬು ವೇಗದಿಂದ ಕೆಳಗೆ ಪ್ರವಹಿಸುವುವು. ಆದುದರಿಂದ ನದಿಗಳು ಸಾಧಾರಣವಾಗಿ ಉಕ್ಕಿ ಹರಿಯುವುವು.

ಅಲ್ಲಿಯ ಭೂಮಿ ಬಹಳ ಫಲವತ್ತಾದುದು. ಮಹಾ ಪದ್ಮಸರಸ್ಸಿನ ಅಚ್ಚುಕಟ್ಟಿನಲ್ಲಿರುವ ಸಾವಿರಾರು ಎಕರೆಗಳಲ್ಲಿ ಉತ್ತಮವಾದ ಬೆಳೆಯಾಗುತ್ತಿತ್ತು. ಆದರೆ ಫಸಲನ್ನು ಪ್ರಜೆಗಳು ಅನುಭವಿಸುವ ಮೊದಲೇ ವಿತಸ್ತಾ ನದಿ ಉಕ್ಕಿ, ಸರೋವರಮುಳುಗಿ ಪ್ರವಾಹ ಅಪಾರವಾಗಿ ಬೆಳೆಯೆಲ್ಲಾ ನಾಶನಾಗುತಲಿತ್ತು.

ಅವಂತಿಶರ್ಮನು ಧರ್ಮಪರಾಯಣನು. ತನ್ನಿಂದ ಯಾವುದೋ ದ್ರೋಹವಾದುದರ ಪರಿಣಾಮವಾಗಿ ತನ್ನ ಪ್ರಜೆಗಳು ಈ ರೀತಿ ಸಂಕಷ್ಟಗಳಿಗೆ ಗುರಿಯಾಗುತ್ತಿರುವರೆಂದು ಭಾವಿಸಿದ. ದೇವರುಗಳಿಗೆ ಪೂಜೆ ಮಾಡಿಸಿದ. ಗ್ರಹಶಾಂತಿ ಮಾಡಿಸಿದ. ಯಾಗಯಜ್ಞಗಳನ್ನು ಮಾಡಿಸಿದ್ದಾಯಿತು. ಏನೇ ಮಾಡಲಿ, ಪ್ರವಾಹಗಳು ನಿಲ್ಲಲಿಲ್ಲ. ಪ್ರತಿ ವರ್ಷ ಬರಬರುತಿತ್ತು.

ಒಂದು ದಿನ ರಾಜನ ಕಿವಿಗೆ ಒಂದು ಸುದ್ಧಿ ಬಿತ್ತು. ಅದೇನೆಂದರೆ ಸುಯ್ಯಾ ಎಂಬಾತ ತಾನು ಪ್ರವಾಹಗಳನ್ನು ತಡೆಗಟ್ಟಬಲ್ಲೆನೆಂದು ಎಲ್ಲರಮುಂದೆಯೂ ಹೇಳಿಕೊಂಡು ತಿರುಗುತ್ತಿದ್ದನಂತೆ. ಜನರು ಅವನೊಬ್ಬ ಹುಚ್ಚನೆಂದು ಭಾವಿಸಿ, ತಮಾಷೆ ಮಾಡುತ್ತಿದ್ದರು.

ವರ್ಷವರ್ಷವೂ ಬರುತ್ತಿದ್ದ ಮಹಾ ಪೂರವನ್ನು ತಡೆಗಟ್ಟಲು ಏನು ಮಾಡಲೂ ಸಿದ್ಧನಾಗಿದ್ದ ಅವಂತಿಶರ್ಮ, ಸುಯ್ಯನನ್ನು ತನ್ನ ಬಳಿಗೆ ಕರೆಯಿಸಿಕೊಂಡ.

"ನೀನು ಕ್ಷಾಮಡಾಮರವನ್ನು ನಿರ್ಮೂಲ ಮಾಡುವೆನೆಂದು ಹೇಳಿದುದು ನಿಜವೇ?" ಎಂದು ಕೇಳಿದ ರಾಜ. "ಚಿತ್ತ, ಮಹಾಪ್ರಭೂ, ಪ್ರವಾಹಗಳಿಲ್ಲದಿದ್ದರೆ ದೇಶದಲ್ಲಿ

ವಿ. ಕೇಶವಪುರಾಣಿಕ

ಕ್ಷಾಮ ವಿರುವುದಿಲ್ಲ," ಎಂದ ಸುಯ್ಯ. "ಪ್ರವಾಹಗಳನ್ನು ನೀನು ತಡೆಗಟ್ಟುವೆಯಾ?" ಎಂದು ಕಾತರಸ್ವರದಲ್ಲಿ ಕೇಳಿದ ರಾಜ.

"ಆದೀತು ಸ್ವಾಮಿ" ಎಂದು ಉತ್ತರ ಕೊಟ್ಟ ಸುಯ್ಯಾ.

"ನಾವು ಮಾಡಲಾರದುದನ್ನು ನೀನೊಬ್ಬನೇ ಹೇಗೆ ಮಾಡಬಲ್ಲೆ?" ರಾಜನು ಕೇಳಿದ. "ಹಣ ಕೊಡಿಸಿ. ಜಗತ್ತಿನಲ್ಲಿ ಹಣದಿಂದ ಮಾಡಲಾರದ ಕೆಲಸ ಯಾವುದಿದೆ?" ಎಂದ ಸುಯ್ಯಾ.

"ನಮ್ಮ ಖಜಾನೆಯಲ್ಲಿರುವ ಹಣವನ್ನೆಲ್ಲಾ ತೆಗೆದುಕೊಂಡು ಹೋಗು. ಆದರೆ ಬರುವ ವರ್ಷ ಪ್ರವಾಹದ ಸೊಲ್ಲೇ ಇರಬಾರದು, ನೋಡು" ಎಂದ ರಾಜ.

ಮಂತ್ರಿ ರಾಜನನ್ನು ತಡೆಯಲು ಪ್ರಯತ್ನಿಸಿದ. ಆದರೆ ರಾಜನು ಆತನ ಮಾತಿಗೆ ಸ್ವಲ್ಪಕೂಡ ಕಿವಿಕೊಡಲಿಲ್ಲ.

ಸುಯ್ಯಾ ಖಜಾನೆಯಿಂದ ತಾನು ಹೊರಬಲ್ಲಷ್ಟು ಚಿನ್ನದ ನಾಣ್ಯಗಳನ್ನು ಮೂಟೆಕಟ್ಟಿಕೊಂಡು ಹೊರಬಿದ್ದ. ಪ್ರಜೆಗಳು ಅವನನ್ನು ಉಡಾಯಿಸುತ್ತಾ, ಗೇಲಿಮಾಡುತ್ತಾ ಹಿಂಬಾಲಿಸಿದರು. ರಾಜನನ್ನು ಮೋಸಗೊಳಿಸಿ ಸುಯ್ಯಾ ಹಣಹಾರಿಸಿದನೆಂದರು ಕೆಲವರು. ಕೆಲವರು ಸುಯ್ಯಾನಂತೆ ರಾಜನಿಗೂ ಹುಚ್ಚು ಹಿಡಿಯಿತು ಎಂದರು.

ಆ ಹಣವನ್ನು ತೆಗೆದುಕೊಂಡು ಹೋಗಿ ಸುಯ್ಯಾ ಏನು ಮಾಡುವನೋ ಎಂದು



ನೋಡಲು ಅನೇಕರು ಕುತೂಹಲಗೊಂಡರು. ಪ್ರತಿವರ್ಷವೂ ಪ್ರವಾಹ ತರುವ ವಿತಸ್ತಾ ನದಿ ಕೊಂಚದೂರ ಹರಿದಮೇಲೆ ಬೆಟ್ಟಗಳ ಸಂದಿನಮೂಲಕ ಕಣಿವೆಗೆ ಹರಿಯುತಿತ್ತು. ನೂರಾರು ವರ್ಷಗಳಿಂದ ಬ್ರಹ್ಮಾಂಡವಾದ ಬಂಡೆಗಳು ಇಕ್ಕಡೆಗಳಲ್ಲಿರುವ ಬೆಟ್ಟಗಳ ಮೇಲಿಂದ ಉರುಳಿ ನದಿಗೆ ಅಡ್ಡವಾಗಿ ಸೇತುವೆಯಂತೆ ಬಿದ್ದಿದ್ದವು. ಪ್ರವಾಹ ಬಂದಾಗಹೊರತು ಉಳಿದ ಕಾಲದಲ್ಲಿ ಜನರು ಆ ಬಂಡೆಗಳಿಂದ ಏರ್ಪಟ್ಟ ಸೇತುವೆಯ ಮೂಲಕ ನದಿಯನ್ನು ದಾಟುತ್ತಿದ್ದರು. ಆ ಕಲ್ಲುರಾಶಿಯ ಮೂಲಕವೇ ಪ್ರವಾಹ ಬರುವುದೂ, ಸರಸ್ಸು ಉಕ್ಕಿ ಹರಿಯುವುದೂ, ಬೆಳೆ ನಾಶವಾಗುವುದೂ ನಡೆಯುತಿತ್ತು.

ಸುಯ್ಯಾ ಹಣವನ್ನು ಹೊತ್ತುಕೊಂಡು ಆ ಪ್ರದೇಶವನ್ನು ತಲುಪಿದ. ಅನೇಕ ಸಾವಿರ ಜನ ಅವನನ್ನು ಹಿಂಬಾಲಿಸಿ ಬಂದರು. ಸುಯ್ಯಾ ನದಿಗೆ ಅಡ್ಡವಾಗಿರುವ ಕಲ್ಲುಸೇತು ವೆಯಮೇಲೆ ಹೋಗಿ ಬಂಗಾರದ ನಾಣ್ಯ ಗಳನ್ನು ತೆಗೆದು ಕಲ್ಲುಗಳನಡುವೆ ಎರಚುತ್ತಾ ಆಚೆದಡವನ್ನು ಸೇರಿಕೊಂಡ.

ಜನರಲ್ಲಿ ಹಾಹಾಕಾರ ವುಂಟಾಯಿತು. ಸುಯ್ಯಾ ನಿಜವಾಗಿ ಹುಚ್ಚನೆಂದು ರುಜು ವಾಯಿತು. ಹಾಗಿಲ್ಲದ ಪಕ್ಷಕ್ಕೆ ಈ ರೀತಿ ಚಿನ್ನದ ನಾಣ್ಯಗಳನ್ನು ನದಿಗೆಸೆಯುವನೇ? ಆದರೆ ಅವನನ್ನು ತಡೆಯಲು ಯಾರಿಂದಲೂ ಸಾಧ್ಯವಾಗಲಿಲ್ಲ.

ಜನರಲ್ಲಿ ಕೆಲವರಿಗೆ ಒಂದು ಹೊಸ ಚೈತನ್ಯ ಮೂಡಿತು. ಕೆಲವರು ಬೇಗ ಬೇಗ ನೀರಿಗಿಳಿದು ನಾಣ್ಯಗಳಿಗಾಗಿ ಹುಡುಕಾಡ ತೊಡಗಿದರು. ಇನ್ನು ಕೆಲವರು ಗುಂಪು ಗಳನ್ನು ಕಟ್ಟಿಕೊಂಡು ಭಾರಿ ಭಾರಿ ಬಂಡೆ ಗಳನ್ನು ದಡಕ್ಕೆ ಸೇರಿಸಿ ಚಿನ್ನದ ನಾಣ್ಯ ಗಳನ್ನು ಆರಿಸಿಕೊಳ್ಳುತ್ತಿದ್ದರು.

ಕ್ಷಿಪ್ರದಲ್ಲಿಯೇ ಈ ಸಮಾಚಾರ ಸುತ್ತ ಮುತ್ತಲಿದ್ದ ಗ್ರಾಮಗಳಿಗೆ ಹರಡಿತು. ಲಕ್ಷಾಂತರ ಜನ ಬಂದು ನೂರಾರು ವರ್ಷ ಗಳಿಂದ ನದಿಗೆ ಅಡ್ಡವಾಗಿ ಬಿದ್ದಿದ್ದ ಕಲ್ಲು ಬಂಡೆಗಳನ್ನು ದಡಕ್ಕೆ ಸೇರಿಸುತ್ತಿದ್ದರು. ಅವರನ್ನು ಹುರಿದುಂಬಿಸಲು ಸುಯ್ಯಾ ಖಜಾನೆಯಿಂದ ಇನ್ನಷ್ಟು, ಮತ್ತಷ್ಟು ಬಂಗಾ ರದ ನಾಣ್ಯಗಳನ್ನು ತರಿಸಿ, ಇನ್ನೂ ಕದ ಲಿಸದೆ ಉಳಿದಿದ್ದ ಬಂಡೆಗಳ ಬಿರುಕುಗಳಲ್ಲಿ ಎಸೆಯುತ್ತಿದ್ದನು.

ಸಾಯಂಕಾಲದ ವೇಳೆಗೆ ಕಲ್ಲಿನ ಸೇತುವೆ ನಿರ್ಮೂಲವಾಯಿತು. ಕಷ್ಟಪಟ್ಟು ಕೆಲಸ ಮಾಡಿದವರಿಗೆಲ್ಲಾ ಅವರವರ ಶಕ್ತಿಗೆ ತಕ್ಕಷ್ಟು ಬಂಗಾರದ ನಾಣ್ಯಗಳು ಸಿಕ್ಕಿದವು.

ಅಂದಿನಿಂದ ಕಾಶ್ಮೀರದ ಪ್ರಜೆಗಳು ಪ್ರವಾಹ, ಮತ್ತು ಕ್ಷಾಮಡಾಮರಗಳ ಕೋಟಲೆ ಇಲ್ಲದೆ ಸುಖ ಶಾಂತಿಯಿಂದ ಜೀವಿಸುತ್ತಿದ್ದರು. ಸುಯ್ಯಾನ ಯುಕ್ತಿಯನ್ನು ಮೆಚ್ಚಿ ಅವಂತಿಶರ್ಮನು ಅವನಿಗೆ ಹೇರಳವಾಗಿ ಹಣವನ್ನು ಕೊಟ್ಟು ಸತ್ಕರಿಸಿದನು.






# ತಪ್ಪುಗಾರ

ಒಂದು ದೇಶದಲ್ಲಿ ಒಬ್ಬ ಧನಿಕ ವರ್ತಕನಿದ್ದನು. ಆತನಿಗೆ ಮೂವರು ಮಕ್ಕಳು. ಅವಸಾನಕಾಲ ಸನ್ನಿಹಿತವಾಗಲು ಆತನು ತನ್ನ ಮಕ್ಕಳನ್ನು ಹತ್ತಿರ ಕರೆದು "ಮಕ್ಕಳೇ, ನನ್ನನ್ನು ಕೊಂಡೊಯ್ಯಲು ಯಮದೂತರು ಬರುತ್ತಿದ್ದಾರೆ. ನಾನೆಷ್ಟೋ ಶ್ರಮವಹಿಸಿ ಅಪಾರ ಆಸ್ತಿಗಳಿಸಿದೆ. ಆ ಆಸ್ತಿಯಲ್ಲಿ ಒಹಳ ಬೆಲೆ ಬಾಳುವಂತಹ ಮೂರು ರತ್ನಗಳಿವೆ. ನೀವು ಯಾವುದೇ ಕಾರಣದಿಂದ ಬೇರೆಯಾಗುವುದಿದ್ದರೆ ಈ ಮೂರು ರತ್ನಗಳನ್ನು ಮೂವರೂ ಹಂಚಿಕೊಳ್ಳಿರಿ. ಆ ಮೂರು ರತ್ನಗಳ ಬೆಲೆಯಲ್ಲಿ ವ್ಯತ್ಯಾಸವಿಲ್ಲ," ಎಂದು ಹೇಳಿದ.

.ಕೆಲಕಾಲಾನಂತರ ವರ್ತಕನು ತೀರಿಕೊಂಡನು. ಅಣ್ಣತಮ್ಮಂದಿರು ಪ್ರತ್ಯೇಕವಾಗಲು ನಿರ್ಧರಿಸಿದರು. ಆಸ್ತಿಯಲ್ಲಿ ಬಹಳ ಮುಖ್ಯವಾದುದು ರತ್ನಗಳಾದುದರಿಂದ ತಲಾ ಒಂದೊಂದು ರತ್ನವನ್ನು ಪಡೆಯಲು ರತ್ನದ ಸಂದುಕವನ್ನು ತೆಗೆದು ನೋಡಿದರು. ಆದರೆ ಅದರಲ್ಲಿ ಎರಡೇ ಎರಡು ರತ್ನಗಳಿದ್ದುವು. ಮೂರನೇಯದನ್ನು ಯಾರೋ ಅಪಹರಿಸಿದ್ದರು. ಆ ಸಹೋದರರಲ್ಲೇ ಒಬ್ಬಾತನು ಕಳ್ಳನಾಗಿರಬೇಕು. ಏಕೆಂದರೆ ಹೊರಗಿನವರಿಗೆ ಈ ವಿಷಯ ಗೊತ್ತಾಗುವ ಅವಕಾಶವೇ ಇಲ್ಲ. ಕಳ್ಳತನ ಮಾಡಲು ಸಾಧ್ಯವೂ ಇಲ್ಲ.

ನಮ್ಮಲ್ಲಿ ಯಾರೋ ಒಬ್ಬರು ರತ್ನವನ್ನು ಅಪಹರಿಸಿರಬೇಕು. ನಾವು ಒಬ್ಬರನ್ನೊಬ್ಬರು ನಿಂದಿಸಿಕೊಳ್ಳುವುದು ಸರಿಕಾಣದು. ರತ್ನವನ್ನು ಅಪಹರಿಸಿದಾತನು ತನ್ನ ತಪ್ಪನ್ನು ಒಪ್ಪಿಕೊಳ್ಳಲು ಲಜ್ಜೆಪಡಬಹುದು. ಆದುದರಿಂದ ಯಾರಿಗೂ ಅವಮಾನವುಂಟಾಗದಂತೆ ಯಾರಿಗೂ ಅನ್ಯಾಯ ನಡೆಯದಂತೆ ನಾಳೆಯೊಳಗೆ ರತ್ನವನ್ನು ಯಥಾಸ್ಥಾನದಲ್ಲಿಡಲಿ" ಎಂದ ಹಿರಿಯವನು.

"ಹಾಗಿಡದ ಪಕ್ಷಕ್ಕೆ ಏನು ಮಾಡಬೇಕು?" ಎಂದು ಎರಡನೇಯವನು ಕೇಳಿದ.

"ಮೂವರೂ ದೊರೆಯ ಬಳಿ ದೂರು ಮಾಡೋಣ. ತಪ್ಪನ್ನು ನಿರೂಪಿಸುವ ಭಾರ ಸದಾ ರಾಜನ ಮೇಲಿದ್ದೇ ಇರುತ್ತದೆ," ಎಂದು

ಎಂ. ವಿಶಾಲಾಕ್ಷಿ



ಹಿರಿಯವನು ಹೇಳಿದ. "ಇದು ಸರಿ. ಹಾಗೆಯೇ ಮಾಡುವ" ಎಂದ ಮೂರನೆಯವನು.

ಮತ್ತೊಂದು ದಿನ ಕಳೆಯಿತು. ಕಳೆದು ಹೋದ ರತ್ನ ಪತ್ತೆಯಾಗಲಿಲ್ಲ. ಅಂದೇ ಮೂವರೂ ರಾಜನಬಳಿಗೆ ಹೋದರು. ರಾಜನಿಗೆ ಸವಿವರವಾಗಿ ತಿಳಿಸಿ, ತಮ್ಮಲ್ಲಿ ತಪ್ಪುಗಾರನ್ಯಾರೋ ತಿಳಿಸಬೇಕೆಂದು ಕೋರಿದರು.

ಈ ಕೋರಿಕೆಯನ್ನು ಕೇಳಿ ರಾಜನು ಸ್ತಬ್ಧನಾದನು. "ನಿಮ್ಮ ತಂದೆಯು ನೀತಿವಂತ, ನ್ಯಾಯವಂತ, ನನ್ನ ಆಪ್ತಮಿತ್ರನೂ ಹೌದು. ಆತನ ಮಕ್ಕಳಾದ ನೀವು ನನ್ನಬಳಿಗೆ ಬಂದು ತೀರ್ಪು ಕೊಡುವಂತೆ ಕೇಳುವುದು ಸಂತೋಷಕರವೂ, ವಿಷಾದಕರವೂ ಆಗಿದೆ. ನಿಮ್ಮ ನಿಮ್ಮಲ್ಲಿ ಸಮಸ್ಯೆಯನ್ನು ಬಗೆಹರಿಸಿಕೊಳ್ಳಲಾರದೆ ನನ್ನಹತ್ತಿರಕ್ಕೆ ಬಂದಿರುವಿರಿ. ಕೆಲವು ದಿನಗಳಲ್ಲೇ ನಿಮ್ಮ ಕೆಲಸ ಮಾಡಿ ಮುಗಿಸುವೆನು. ಅದುವರೆವಿಗೂ ನೀವು ಮೂವರೂ ಅಡುಗೂಲಜ್ಜಿಯ ಮನೆಯಲ್ಲಿರಿ. ನಿಮಗೆ ಆವಶ್ಯಕವಾದ ಸೌಕರ್ಯಗಳನ್ನೆಲ್ಲಾ ನಾನು ಏರ್ಪಾಟು ಮಾಡುವೆನು" ಎಂದ ರಾಜ.

ಮೂವರು ಸಹೋದರರೂ ಅಡುಗೂಲಜ್ಜಿಯ ಮನೆಯಲ್ಲಿ ಉಳಿದುಕೊಂಡರು. ದಿನಗಳು ಒಂದಾದಮೇಲೊಂದು ಕಳೆದು ಹೋಗುತಲಿತ್ತು. ಅಹೋರಾತ್ರಿಗಳು ಈ ಸಮಸ್ಯೆಯನ್ನು ಕುರಿತು ಆಲೋಚಿಸುತ್ತಿದ್ದರೂ ವಿಚಾರಣೆ ಯಾವರೀತಿ ಪ್ರಾರಂಭಿಸಬೇಕೋ ರಾಜನಿಗೆ ಹೊಳೆಯಲಿಲ್ಲ. ಒಂದು ದಿನ ರಾಜನು ಅಡುಗೂಲಜ್ಜಿಗೆ ಹೇಳಿಕಳುಹಿಸಿದ.

"ಅಜ್ಜಿ, ನಿನ್ನ ಮನೆಯಲ್ಲಿರುವ ಅತಿಥಿಗಳಿಂದ ನಿನಗೇನೂ ತೊಂದರೆಯಾಗುತ್ತಿಲ್ಲವಷ್ಟೆ?" ಎಂದು ಕೇಳಿದ ರಾಜ.

"ಇಲ್ಲ ಪ್ರಭೂ, ಅವರು ಮೂವರೂ ತುಂಬಾ ಒಳ್ಳೆಯವರು. ಸಂಭಾವಿತರು" ಎಂದಳು ಅಜ್ಜಿ.

"ಆದರಿಂದಲೇ ನಾನು ಸಂದಿಗ್ಧದಲ್ಲಿ ಸಿಲುಕಿರುವೆನು. ಆ ಮೂವರಲ್ಲಿ ಒಬ್ಬಾತ ಭಾರಿ ಕಳ್ಳನಿದ್ದಾನೆ" ಎಂದ ರಾಜ.

ಅಜ್ಜಿ ಆಶ್ಚರ್ಯ ಚಕಿತಳಾದಳು. ಸಮಾಚಾರವೇನೆಂದು ಕೇಳಿದಳು. ರಾಜನು ಮರೆಮಾಚದೆ ನಡೆದುದನ್ನೆಲ್ಲಾ ಆಕೆಗೆ ತಿಳಿಸಿದ. "ತಪ್ಪುಗಾರನನ್ನು ನಾನು ಪತ್ತೆ ಹಚ್ಚಿಕೊಡು

ತ್ತೇನೆ. ನೀವೇನೂ ಚಿಂತಿಸಬೇಡಿ ಪ್ರಭೂ" ಎಂದು ದೊರೆಗೆ ಸಮಾಧಾನ ಹೇಳಿದಳು ಅಜ್ಜಿ.

ಆ ರಾತ್ರಿ ಅಜ್ಜಿ ಆ ಸಹೋದರರು ಊಟ ಮಾಡುತ್ತಿರುವಾಗ ಒಂದು ಸಣ್ಣ ಕಥೆಯನ್ನು ಹೇಳಲಾರಂಭಿಸಿದಳು.

"ಒಂದಾನೊಂದು ಕಾಲದಲ್ಲಿ ಸಿಂಹಕೇತನೆಂಬ ರಾಜನಿದ್ದ. ಆತನಿಗೆ ಗುಣವತಿ ಎಂಬ ಒಬ್ಬಳೇ ಮಗಳು. ಆಕೆಗೆ ಯುಕ್ತವಯಸ್ಸು ಪ್ರಾಪ್ತವಾಗುವ ತನಕ ಒಬ್ಬ ಪಂಡಿತನಬಳಿ ವಿದ್ಯೆ ಕಲಿಸಿದರು. ಆಕೆಗೆ ವಿವಾಹ ಪ್ರಯತ್ನಗಳನ್ನು ಆರಂಭಿಸಿದ ಕೂಡಲೇ ವ್ಯಾಸಂಗವನ್ನು ಸಾಕುಮಾಡಿಸಿದರು.

ಒಂದು ದಿನ ಆಕೆ ಅನೇಕ ವಸ್ತ್ರಭೂಷಣಗಳನ್ನೂ, ಹಣವನ್ನೂ ತೆಗೆದುಕೊಂಡು ಹೋಗಿ ಗುರುದಕ್ಷಿಣೆ ಸಲ್ಲಿಸಿದಳು. ಆದರೆ ಆ ಪಂಡಿತೋತ್ತಮನು ಅವುಗಳನ್ನು ಸ್ವೀಕರಿಸದೆ 'ನೀನು ಮದುವೆಯಾಗಿ ಪರಾಧೀನಳಾಗುವ ಮೊದಲು ಒಂದು ರಾತ್ರಿ ನನ್ನಬಳಿಗೆ ಸರ್ವಾಭರಣ ಭೂಷಿತಳಾಗಿ ಒಬ್ಬಳೇ ಬರಬೇಕು. ಅದೇ ನನಗೆ ಗುರುದಕ್ಷಿಣೆ' ಎಂದ. ಗುಣವತಿ ಅದಕ್ಕೆ ಒಪ್ಪಿಕೊಂಡು ಅರಮನೆಗೆ ಹಿಂತಿರುಗಿದಳು.

ಆಕೆಗೆ ಕೆಲವು ದಿನಗಳಲ್ಲೇ ವಿವಾಹವಾಯಿತು. ವಿವಾಹ ನಡೆದಂದು ರಾತ್ರಿ ಆಕೆ ತನ್ನ ಗಂಡನೊಂದಿಗೆ ಗುರುದಕ್ಷಿಣೆಯ ವಿಷಯವನ್ನು ಪ್ರಸ್ತಾಪನೆ ಮಾಡಿದಳು. ಆಕೆಯ ಪತಿ 'ಹೋಗಿ ಬಾ' ಎಂದು ಅವಳಿಗೆ ಅನುಮತಿ ನೀಡಿದನು.





ಗುಣವತಿ ಸರ್ವಾಲಂಕಾರಭೂಷಿತಳಾಗಿ ಗುರುಗಳ ಮನೆಗೆ ಹೋಗುತ್ತಿರುವಾಗ ಹಾದಿಯಲ್ಲಿ ಕಳ್ಳನೊಬ್ಬನು ಆಕೆಯನ್ನು ಅಡ್ಡಗಟ್ಟಿದನು. ಒಡವೆಗಳನ್ನು ಕಳಚಿ ಕೊಡುವಂತೆ ನಿರ್ಬಂಧಿಸಿದನು. ಕೊಡದಿದ್ದರೆ ಕೊಲ್ಲುವೆನೆಂದು ಬೆದರಿಸಿದನು. ಗುಣವತಿ ಕಳ್ಳನೊಂದಿಗೆ ಗುರುದಕ್ಷಿಣೆಯ ವಿಷಯವನ್ನು ತಿಳಿಸಿ, ಹಿಂತಿರುಗಿ ಬರುವಾಗ ಒಡವೆಗಳನ್ನೆಲ್ಲಾ ಆತನಿಗೆ ಕೊಡುವುದಾಗಿ ವಾಗ್ದಾನ ಮಾಡಿದಳು. ಕಳ್ಳನು ಆಕೆಯ ಮಾತನ್ನು ನಂಬಿ ಒಪ್ಪಿಕೊಂಡನು.

ಗುಣವತಿ ಗುರುಗಳ ಮನೆ ಸೇರಿದಳು. ಪಂಡಿತನು ತನ್ನ ಶಿಷ್ಯಳ ಸತ್ಯಸಂಧತೆಗೆ ಸಂತೋಷಗೊಂಡು "ಮಗೂ, ನಾನು ಹೇಳಿ



ಕೊಟ್ಟ ವಿದ್ಯೆ ಸಾರ್ಥಕವಾಯಿತು. ಮುಂದೆ ಒದಗಬಹುದಾದ ಪ್ರಮಾದವನ್ನೂ ಸಹ ಲೆಕ್ಕಿಸದೆ ನಿನ್ನ ಮಾತನ್ನು ಉಳಿಸಿಕೊಂಡೆ. ಇದೇ ನನಗೆ ಗುರುದಕ್ಷಿಣೆ. ನೀನು ಹಿಂತಿರುಗಿ ಹೋಗಿ ನಿನ್ನ ಗಂಡನೊಂದಿಗೆ ಸುಖವಾಗಿ ಸಂಸಾರ ಮಾಡಿಕೊಂಡಿರು" ಎಂದು ಆಶೀರ್ವಾದ ಮಾಡಿದನು.

ಗುಣವತಿ ಗುರುಗಳಿಗೆ ನಮಸ್ಕಾರಮಾಡಿ, ಹಿಂತಿರುಗಿ ಬರುತ್ತಾ ದಾರಿಯಲ್ಲಿ ತನಗಾಗಿ ಎದುರುನೋಡುತ್ತಿದ್ದ ಕಳ್ಳನ ಬಳಿ ಸಾರಿ "ಅಯ್ಯಾ, ನನ್ನ ಒಡವೆಗಳನ್ನು ಈಗ ತೆಗೆದುಕೊ" ಎಂದಳು. ಆಕೆಯ ಮಾತುಗಳನ್ನು ಕೇಳಿ ಕಳ್ಳನ ಮನಸ್ಸು ಬದಲಾಯಿಸಿತು. ಅವನು ಗುಣವತಿಯ ಕಾಲಿಗೆರಗಿ "ತಾಯೀ, ನನ್ನನ್ನು ಕ್ಷಮಿಸು. ನಿನ್ನಂತಹ ಮಹಾತಾಯಿಯರು ಇರುವ ಈ ಪ್ರಪಂಚದಲ್ಲಿ ನಾನು ಕಳ್ಳತನ ಮಾಡಿ ಜೀವಿಸಲಾರೆ" ಎಂದು ಹೇಳಿ ಕತ್ತಲಲ್ಲಿ ಮಾಯವಾದನು.

ಗುಣವತಿ ನೆಟ್ಟನೆ ಗಂಡನ ಬಳಿಗೆ ಬಂದು ನಡೆದ ವಿಷಯವನ್ನೆಲ್ಲಾ ತಿಳಿಸಿದಳು. ಆಕೆಯ ಪತಿಯು ಎಲ್ಲವನ್ನೂ ಕೇಳಿ ಬಹಳ ಸಂತೋಷಪಟ್ಟನು. ಅವರಿಬ್ಬರೂ ಸುಖವಾಗಿ ಸಂಸಾರ ಮಾಡಿಕೊಂಡು ಬಹಳಕಾಲ ಬಾಳಿದರು."

ಅಜ್ಜಿ ಹೇಳಿದ ಕಥೆ ಕೇಳಿ ಆ ಮೂವರು ಸಹೋದರರೂ ಆನಂದಿಸಿದರು.

"ಆದರೆ ನನಗೊಂದೇ ಸಂದೇಹ. ಈ ಕಥೆಯಲ್ಲಿ ಅನೇಕ ಉಪಕಾರಿಗಳಿರುವರು. ಆದರೆ

ಎಲ್ಲರಿಗಿಂತಲೂ ಯಾರ ಔದಾರ್ಯ ಉದಾತ್ತ ವಾದುದು? ಈ ಸಂದೇಹ ನನ್ನನ್ನು ಬಹಳ ವಾಗಿ ಪೀಡಿಸುತ್ತಿದೆ. ಮಕ್ಕಳೇ, ನೀವು ನನ್ನ ಅನುಮಾನವನ್ನು ಪರಿಹರಿಸುವಿರಾ?" ಎಂದು ಕೇಳಿದಳು ಅಜ್ಜಿ.

ಹಿರಿಯವನು ಆಲೋಚನೆಮಾಡಿ "ವಿವಾಹ ವಾದರೂ ತನ್ನ ಪತ್ನಿಯನ್ನು ಗುರುವಿನಬಳಿಗೆ ಕಳುಹಿಸಿಕೊಟ್ಟ ಪತಿಯ ಔದಾರ್ಯ ಅತಿ ಶಯವಾದದು" ಎಂದ.

"ಅದಕ್ಕಿಂತಲೂ ಗುರುಗಳ ಔದಾರ್ಯ ಮಿಗಿಲಾದುದು" ಎಂದ ಎರಡನೆಯವನು.

"ಕೈಗೆ ಸಿಕ್ಕಿದ ಒಡವೆಗಳನ್ನು ಅಪಹರಿಸದೆ ಸುಮ್ಮನಾದ ಕಳ್ಳನ ಔದಾರ್ಯವೇ ಅಧಿಕ ವಾದುದು" ಎಂದ ಮೂರನೆಯವನು.

"ಗಂಡನ ಆಗ್ರಹವನ್ನೂ, ಗುರುಗಳಿಂದ ಅವಮಾನವನ್ನೂ, ಕಳ್ಳನ ದುರಾಶೆಯನ್ನೂ ಎದುರಿಸಿದ ಗುಣವತಿಯ ಔದಾರ್ಯ ನಿಮಗೆ ಮೆಚ್ಚಿಕೆಯಾಗಲಿಲ್ಲವೇ?" ಎಂದು ಅಜ್ಜಿ ಗೊಳ್ಳನೆ ನಕ್ಕಳು. ಹೀಗೆ ಕಥೆ ಮುಗಿದಮೇಲೆ ಅಜ್ಜಿ ಮೆಲ್ಲನೆ ರಾಜನ ಬಳಿಗೆ ಹೋಗಿ "ಮಹಾ ಪ್ರಭೂ, ನಮ್ಮ ಮನೆಯಲ್ಲಿರುವ ಅಣ್ಣತಮ್ಮಂದಿರಲ್ಲಿ ಕಿರಿಯವನು ಕಳ್ಳ. ತಾವು ದಯವಿಟ್ಟು ವಿಚಾರಣೆಮಾಡಿ ನಿಜಾಂಶವನ್ನು ತಿಳಿಯಿರಿ" ಎಂದಳು.

"ನಿನ್ನ ಊಹೆಗೆ ಕಾರಣವೇನು?" ಎಂದು ರಾಜನು ಕೇಳಲು, ಅಜ್ಜಿ ನಡೆದುದನ್ನೆಲ್ಲಾ ತಿಳಿಸಿ ಹೀಗೆಂದಳು: "ಆ ಹುಡುಗನು ಧನ ಲೋಭಿಯಲ್ಲದ ಪಕ್ಷಕ್ಕೆ ಕಳ್ಳನ ಔದಾರ್ಯ ವನ್ನು ಮೆಚ್ಚುತ್ತಿರಲಿಲ್ಲ."

ಮಾರನೆಯದಿನ ಮೂವರು ಸಹೋದರ ರನ್ನೂ ರಾಜನು ತನ್ನ ಕೋಣೆಗೆ ಬರಮಾಡಿ ಕೊಂಡು "ರತ್ನದ ಸಂದೂಕದಲ್ಲಿರುವ ಎರಡು ರತ್ನಗಳನ್ನು ಹಿರಿಯವರಾದ ಇಬ್ಬರೂ ಹಂಚಿ ಕೊಳ್ಳಲಿ. ಅದೇ ನ್ಯಾಯ" ಎಂದ.

ಕಿರಿಯವನು ಅಣ್ಣಂದಿರ ಮುಖಗಳನ್ನು ನೋಡಲಾರದೆ ತಲೆ ತಗ್ಗಿಸಿಕೊಂಡಿದ್ದನೇ ಹೊರತು ರಾಜನ ತೀರ್ಪಿಗೆ ಪ್ರತಿಯಾಡಲಿಲ್ಲ.

ತರುವಾಯ ಮೂವರು ಅಣ್ಣತಮ್ಮಂದಿರು ಮನೆಗೆ ಹೋಗಿ ಇತರ ಸ್ವತ್ತುಗಳನ್ನು ಸಮ ವಾಗಿ ಹಂಚಿಕೊಂಡರು.





# ಕೆಟ್ಟ ಮಾತುಗಳು

ಒಂದು ಎತ್ತು, ಒಂದು ಕೋಣ, ಒಂದು ಕತ್ತೆ ಹುಲ್ಲುಗಾವಲಿನಲ್ಲಿ ಆ ಮಾತು ಈ ಮಾತು ಆಡತೊಡಗಿದವು. "ನಾನು ಬಲಶಾಲಿಯಾದ ಪ್ರಾಣಿ. ನನ್ನಿಂದ ಜನ ಕಾಳುಕಡಿ ಪಡೆಯುವರು. ರೈತರು ನನ್ನನ್ನು ತಮ್ಮ ಪ್ರಾಣದಂತೆ ಕಾಪಾಡುವರು. ನಾನಿಲ್ಲವಾದರೆ ಜಗತ್ತೇ ಶೂನ್ಯ. ಆದರೂ ತಿಳಿಗೇಡಿಗಳಾದ ಮನುಷ್ಯರು ನನ್ನ ಹೆಸರನ್ನು ಬಯ್ಯುವುದಕ್ಕೆ ಉಪಯೋಗಿಸುವರು. ನನ್ನ ಮೈ ಉರಿಯುತ್ತದೆ. ಎಷ್ಟುದಿನಾಂತ ಇದನ್ನು ಸಹಿಸಿಕೊಂಡಿರಲಿ?" ಎಂದಿತು ಎತ್ತು.

"ನನ್ನ ವಿಷಯಮಾತ್ರವೇನು? ನಾನು ಚಾಕರಿ ಮಾಡುತ್ತೇನೆ. ನನ್ನದು ತುಂಬಾ ಸಾಧುಸ್ವಭಾವ. ನಾನು ಬಡರೈತನಪಾಲಿನ ಬಂಧು. ನಾನು ಸತ್ತಮೇಲೂ ನನ್ನ ಚರ್ಮದಿಂದ ಪಾದರಕ್ಷೆಗಳನ್ನು ಮಾಡಿಸಿ, ತೊಟ್ಟು ತಿರುಗಾಡುತ್ತಾರೆ. ಯಾರಿಗೂ ಏನೊಂದೂ ಅಪಕಾರ ಮಾಡದಿರುವ ನನ್ನ ಹೆಸರು ಹಿಡಿದು ಮನುಷ್ಯರು ಕೆಟ್ಟಭಾಷೆ ಪ್ರಯೋಗಿಸಿದರೆ ನನ್ನ ಮನಸ್ಸು ಹೇಗಿರಬೇಕೋ ನೀವೇ ಊಹಿಸಿ" ಎಂದಿತು ಕೋಣ.

"ಸಹನೆಗೆ ನನ್ನ ಹೆಸರು ಹೇಳಬೇಕು. ಎಷ್ಟು ಭಾರವನ್ನಾದರೂ ಹೊರುವೆನು. ಆದರೂ ನಾನು ಯಜಮಾನನಿಗೆ ಹೊರೆಯಾಗಿಲ್ಲ. ಊರೆಲ್ಲಾ ತಿರುಗಿ ಎಲ್ಲಿ ಯಾವ ಆಹಾರ ಸಿಕ್ಕಿದರೆ ಅದನ್ನು ತಿನ್ನುತ್ತೇನೆ. ಮಳೆ ಬಂದಾಗ ಎಲ್ಲಿ ಚಾವಣಿ ಕಾಣಿಸಿದರೆ ಅಲ್ಲಿ ನಿಲ್ಲುತ್ತೇನೆ. ಬಿಸಿಲಿನ ತಾಪ ಹೆಚ್ಚಾದರೆ ಯಾವುದೋ ಒಂದು ಮರದ ನೆರಳಲ್ಲಿ ನಿಲ್ಲುವೆನು. ನನ್ನಿಂದ ಯಜಮಾನನಿಗೆ ಯಾವ ತೊಂದರೆಯೂ ಇಲ್ಲ. ಹೀಗಿರಲು, ಈ ಜನ ನನ್ನ ಹೆಸರನ್ನು ತುಂಬಾ ಹೀನವಾಗಿ ಪ್ರಯೋಗಿಸುವರು. ನಾನು ಯಾರಹತ್ತಿರ ಹೋಗಿ ಮೊರೆಯಿಡಲಿ" ಎಂದಿತು ಕತ್ತೆ.

"ನಾವು ಈ ಅನ್ಯಾಯವನ್ನು ಸಹಿಸಿಕೊಂಡಿರುವುದು ಸರಿಯಲ್ಲ. ಏನಾದರೂ

ಎಸ್. ಗೋಪಾಲರಾವ್

ಮಾಡಬೇಕು" ಎಂದಿತು ಕೋಣ. 'ಹೌದು' ಎಂದು ಎತ್ತು ಮತ್ತು ಕತ್ತೆ ತಲೆಯಾಡಿಸಿದುವು.

"ನಾವು ಬ್ರಹ್ಮನಲ್ಲಿಗೆ ಹೋಗಿ ನಮಗಾಗಿರುವ ಅನ್ಯಾಯವನ್ನು ಅರುಹೋಣ" ಎಂದಿತು ಕೋಣ.

ಆ ಮೂರು ಪ್ರಾಣಿಗಳೂ ಬ್ರಹ್ಮದೇವನ ಬಳಿಗೆ ಹೋದುವು. "ಏನು ಇತ್ತ ಬಂದಿರಿ" ಎಂದು ವಿಚಾರಿಸಿದ ಬ್ರಹ್ಮ.

"ಬ್ರಹ್ಮದೇವನೇ, ನಮಗೆ ಮಾನವರು ಬಹಳ ಅನ್ಯಾಯವೆಸಗುತ್ತಿರುವರು. ನಮ್ಮ ಘನತೆಯನ್ನು ನಾವೇ ಹೇಳಿಕೊಳ್ಳುವುದು ಉಚಿತವಲ್ಲ. ಅದರೂ ನಾವೇನೂ ಅನಾಮಧೇಯರಲ್ಲ. ಪರಶಿವನ ವಾಹನವಾಗಿರುವ ನಂದೀಶ್ವರನು ನಮ್ಮ ವಂಶದವನು. ಯಮಧರ್ಮರಾಯನ ವಾಹನವೇ ಕೋಣ. ಗಾರ್ದಭದ ವಿಷಯ ಹೇಳಬೇಕಾಗಿಲ್ಲ. ಶ್ರೀ ಕೃಷ್ಣನ ತಂದೆ ವಸುದೇವನೇ ಕತ್ತೆಯ ಕಾಲು ಹಿಡಿದ" ಎಂದಿತು ಎತ್ತು.

ಸರಿಯೇ. ಮಾನವರು ನಿಮಗೇನು ಮಾಡಿದರು?" ಎಂದು ವಿಚಾರಿಸಿದ ಬ್ರಹ್ಮ.

"ಪವಿತ್ರವಾದ ನಮ್ಮ ಹೆಸರುಗಳನ್ನು ಜನರು ಬಯ್ಯಲು ಬಳಸುತ್ತಿರುವರು," ಎಂದಿತು ಎತ್ತು. "ಮಾನವರಿಂದ ಆಗುತ್ತಿರುವ ಅನ್ಯಾಯವನ್ನು ನೀವು ತಡೆಗಟ್ಟಬೇಕು," ಎಂದಿತು ಕೋಣ. "ಮನುಷ್ಯರು ನಮ್ಮನ್ನು ಗೌರವದಿಂದ ಕಾಣುವಂತೆ ಕ್ರಮ ತೆಗೆದುಕೊಳ್ಳಬೇಕು" ಎಂದಿತು ಕತ್ತೆ.

ಆಗ ಬ್ರಹ್ಮನು ಮಂದಹಾಸ ಬೀರಿ "ಇದು ಮಾನವರ ತಪ್ಪಲ್ಲ. ನಿಮ್ಮ ಬುದ್ಧಿಯಿಂದಲೇ ಅವರಿಗೆ ನಿಮ್ಮಲ್ಲಿ ಗೌರವವಿಲ್ಲವಾಗಿದೆ. ನಿಮ್ಮ ನಡತೆಯನ್ನು ನೀವು ತಿದ್ದಿಕೊಳ್ಳಿ. ನಡೆಯಿರಿ" ಎಂದ. ಮೂರು ಪ್ರಾಣಿಗಳೂ ಮನೆಯ ಹಾದಿಹಿಡಿದುವು.

"ಈ ಕೋಣಕ್ಕೆ ಮನುಷ್ಯರೆಂದರೆ ಪಕ್ಷಪಾತ" ಎಂದಿತು ಕತ್ತೆ.

"ನಾವು ಹೇಳುವುದನ್ನು ಕೇಳದೆ ಇನ್ನೇನೋ ಒದರುತ್ತದೆ ಮೊದ್ದು ಎತ್ತು!" ಎಂದಿತು ಕೋಣ.

"ಮುಖ್ಯವಾಗಿ ಕತ್ತೆಯ ಬಳಿಗೆ ಹೋಗಿ ಮೊರೆಯಿಟ್ಟುದೇ ಪೆದ್ದತನ" ಎಂದಿತು ಎತ್ತು





# ಶೀಲವಂತ ಸಾಮಂತ

ಹಿಂದೆ, ಅಯೋಧ್ಯಾ ಪಟ್ಟಣವನ್ನು ಸರ್ವಜಿತ ಎಂಬ ಅರಸನು ಆಳುತ್ತಿದ್ದನು. ಆತನ ಆಳಿಕೆಯಲ್ಲಿ ಎಲ್ಲೆಡೆಗಳಲ್ಲೂ ನ್ಯಾಯನೆಲೆಸಿತ್ತು. ಆದರೆ ಸರ್ವಜಿತನು ಇನ್ನೂ ಪ್ರಾಯದಲ್ಲಿರುವಾಗಲೇ ವಿರಕ್ತಿ ಹೊಂದಿ, ತನ್ನ ಹಿರಿಯ ಮಗನಿಗೆ ಪಟ್ಟಾಭಿಷೇಕ ಮಾಡಿ ಕಾಡಿನಲ್ಲಿ ತಪಸ್ಸುಮಾಡಲು ಹೊರಟುಹೋದನು.

ಎರಡು ವರ್ಷಗಳು ಕಳೆದು ಹೋದವು. ಒಂದು ದಿನ ಸರ್ವಜಿತನು ತನ್ನ ಆಶ್ರಮದಿಂದ ಬಹಳದೂರ ಸಾಗಿ ಮತ್ತೆ ಆಶ್ರಮಕ್ಕೆ ಹಿಂತಿರುಗಿ ಬರುತ್ತಿರುವಾಗ ಒಂದು ಭಾರಿ ಬಿರುಗಾಳಿ ಪ್ರಾರಂಭವಾಯಿತು. ನಡುಹಗಲೇ ಕಾರ್ಗತ್ತಲೆ ಆವರಿಸಿತು. ಆತನು ದಾರಿತಪ್ಪಿ ಕೊನೆಗೆ ಒಂದು ಪರ್ಣಶಾಲೆಗೆ ಹೋಗಿ ಬಾಗಿಲು ತಟ್ಟಿದನು.

ಅಲ್ಲಿ ಸುಮಂತನೆಂಬಾತ ತನ್ನ ಸತಿಯೊಂದಿಗೆ ವಾಸಮಾಡುತ್ತಿದ್ದನು. ಸುಮಂತನು ಕದವನ್ನು ತೆಗೆದು, ಸರ್ವಜಿತನನ್ನು ಒಳಕ್ಕೆ ಆಹ್ವಾನಿಸಿದನು. ಅತಿಥಿಗೆ ತೊಟ್ಟುಕೊಳ್ಳಲು ಮಡಿಮಾಡಿದ ಬಟ್ಟೆಗಳನ್ನು ಕೊಟ್ಟನು. ಸರ್ವಜಿತನು "ಅಯ್ಯಾ, ಹಸಿವು ನನ್ನನ್ನು ದಹಿಸುತ್ತಿದೆ. ಒಂದಿಷ್ಟು ಅಂಬಲಿಯನ್ನಾದರೂ ಕೊಡಿ" ಎಂದು ಪ್ರಾರ್ಥಿಸಿದನು.

"ಕ್ಷಣಮಾತ್ರದಲ್ಲಿ ಅಡಿಗೆ ಮಾಡುವೆನು. ಕೊಂಚಹೊತ್ತು ವಿಶ್ರಾಂತಿ ತೆಗೆದುಕೊಳ್ಳಿ" ಎಂದು ಹೇಳಿ ಸುಮಂತನ ಪತ್ನಿ ತನ್ನ ಗಂಡನ ಕಿವಿಯಲ್ಲಿ ಏನನ್ನೋ ಪಿಸುಗುಟ್ಟಿದಳು. ಸುಮಂತನು ತಟಕ್ಕನೆದ್ದು ಪಕ್ಕದ ಕೋಣೆಗೆ ಹೋದನು. ಅಲ್ಲಿ ಕಟ್ಟಿಗೆ ಸೀಳುತ್ತಿರುವ ಶಬ್ದ ಸರ್ವಜಿತನ ಕಿವಿಗೆಬಿತ್ತು. ತುಸ ಸಮಯವಾದನಂತರ ಸುಮಂತನು ಕಟ್ಟಿಗೆಗಳನ್ನು ತೆಗೆದುಕೊಂಡು ಅಡಿಗೆ ಮನೆಗೆ ಹೋದನು. ಅಲ್ಲಿ ಆತನ ಪತ್ನಿ ಒಲೆ ಹೊತ್ತಿಸಿ ಅಡಿಗೆ ಮಾಡಲು ಪ್ರಾರಂಭಿಸಿದಳು. ಒಲೆ ಉರಿಯುವಾಗ ಸರ್ವಜಿತನಿಗೆ ಗಂಧದ ಹೊಗೆಯ ವಾಸನೆ ಬಂತು. ಮೈಕಾಯಿಸಿಕೊಳ್ಳುವ ನೆಪದಿಂದ ಆತನು ಒಲೆಯ ಬಳಿಗೆ ಬಂದು ಕುಳಿತುಕೊಂಡನು. ಸುಮಂತನ ಪತ್ನಿ ಗಂಧದ

ಬಿ. ಬಿ. ರಾವು






ಚಿಕ್ಕೆಯಿಂದ ಅಡಿಗೆ ಮಾಡುತ್ತಿರುವುದು ಕಾಣಿಸಿತು. 'ಇವರು ಹಿಂದೆ ಸುಖವಾಗಿ ಬಾಳಿ ಬದುಕಿರಬೇಕು. ಅಂತಲೇ ಗಂಧದ ಮರದಿಂದ ಮಾಡಿದ ವಸ್ತುಗಳಿವೆ ಇವರಲ್ಲಿ. ಆದರೆ ಈಗ ಕಾಡುಸೌದೆಯೂ ಸಹ ಇಲ್ಲದಿರುವಷ್ಟು ಬಡತನ ಕಿತ್ತು ತಿನ್ನುತ್ತಿರುವಾಗ ಈ ಪರ್ಣಶಾಲೆಯಲ್ಲಿ ಏಕಾದರೂ ವಾಸವಾಗಿರುವರೊ? ತಿಳಿಯುತ್ತಿಲ್ಲ' ಎಂದು ಸರ್ವಜಿತನು ಆಶ್ಚರ್ಯಗೊಂಡನು.

ಸ್ವಲ್ಪಹೊತ್ತಿಗೆಲ್ಲಾ ಸಮಂತನ ಭಾರ್ಯೆ ಅಡಿಗೆಯನ್ನು ಮುಗಿಸಿ, ಅತಿಥಿ ಮತ್ತು ತನ್ನ ಗಂಡನಿಗೆ ಎಲೆ ಹಾಕಿದಳು. ಊಟಮಾಡುತ್ತಿರುವಾಗ ಸರ್ವಜಿತನು "ಅಪ್ಪಾ, ನೀವುಗಳು ಉತ್ತಮ ಕುಲದಲ್ಲಿ ಜನಿಸಿದವರಂತೆ ತೋರುವುದು. ಆದರೆ ನೀವು ಈ ಅರಣ್ಯದಲ್ಲಿ ಬಹಳ ಕಷ್ಟಪಡುತ್ತಾ ವಾಸಿಸಲು ಕಾರಣವೇನು?" ಎಂದು ಕೇಳಿದನು.

ಸುಮಂತನು ನಿಟ್ಟುಸಿರು ಬಿಟ್ಟು, "ಸ್ವಾಮಿ, ಸಂಪತ್ತು ಶಾಶ್ವತವಲ್ಲ. ಕೆಲವು ವರ್ಷಗಳ ಹಿಂದೆ ನಾನೊಬ್ಬ ಸಾಮಂತನಾಗಿದ್ದೆ. ಶತ್ರುಗಳು ರಾಜಾಶ್ರಯವನ್ನು ಸಂಪಾದಿಸಿ, ನನ್ನನ್ನು ದೇಶಭ್ರಷ್ಟನನ್ನಾಗಿ ಮಾಡಿದರು. ಅದರಿಂದ ನನಗೇನೂ ಕೊರತೆಯಾಗಲಿಲ್ಲ. ನನ್ನ ಹೆಂಡತಿ ಕುಲೀನ ವಧು. ನನಗೆ ಈ ಅರಣ್ಯದಲ್ಲಿ ಯಥೇಚ್ಛವಾಗಿ ಆಹಾರ ಸಿಗುತ್ತದೆ. ಇಲ್ಲಿದ್ದರೂ ನಾನು ದೇಶಕ್ಕಾಗಿ ಪ್ರಾಣವನ್ನು ಸಮರ್ಪಿಸಬಲ್ಲೆ. ನಾನು ಎಂದೆಂದೆಗೂ ಸಾಮಂತನೇ!" ಎಂದ.

"ರಾಜನಲ್ಲಿಗೆ ಹೋಗಿ ನ್ಯಾಯವನ್ನು ಪಡೆಯಬಾರದೆ?' ಎಂದು ಕೇಳಿದ ಸರ್ವಜಿತ.

"ನ್ಯಾಯ ನುಡಿಯಬಲ್ಲ ಅರಸರು ವಾನಪ್ರಸ್ಥಾಶ್ರಮವಾಸಿಯಾಗಿ ಹೊರಟು ಹೋದರು. ಆತನೊಂದಿಗೆ ನ್ಯಾಯವೂ ಅಡವಿಪಾಲಾಯಿತು" ಎಂದ ಸುಮಂತ.

ಮಾರನೇಯ ದಿನ ಮುಂಜಾನೆ ಸರ್ವಜಿತನು ಆ ದಂಪತಿಗಳಿಂದ ಅಪ್ಪಣೆ ಪಡೆದು ಹೊರಟುಹೋದನು.

ಕೆಳವು ದಿನಗಳು ಕಳೆದವು.

ಸಾಮಂತರೆಲ್ಲರೂ ರಾಜಧಾನಿಯಾದ ಅಯೋಧ್ಯೆಗೆ ತತ್‌ಕ್ಷಣ ಬರಬೇಕೆಂದು ರಾಜ್ಯದಲ್ಲೆಲ್ಲಾ ಡಂಗುರ ಹೊಯಿಸಿದರು.

ಎಲ್ಲೆಲ್ಲಿಯೋ ಇದ್ದ ಸಾಮಂತರೆಲ್ಲಾ ಪಲ್ಲಕ್ಕಿ, ಆನೆ, ಕುದುರೆ ಮುಂತಾದುವುಗಳ ಮೇಲೆ ತಮ್ಮ ತಮ್ಮ ಪರಿವಾರದೊಂದಿಗೆ ಅಯೋಧ್ಯೆಗೆ ಬಂದು ಸೇರಿದರು. ಒಬ್ಬಾತನು ಮಾತ್ರ ಚಿಂದಿಚಿಂದಿಯಾದ ಚೀನಾಂಬರಗಳನ್ನು ತೊಟ್ಟು, ಕೈಯಲ್ಲಿ ಹಳೆಯ ಖಡ್ಗವೊಂದನ್ನು ಹಿಡಿದು, ಕಾಲುನಡಿಗೆಯಲ್ಲಿ, ಏಕಾಂಗಿಯಾಗಿ ಬಂದಿದ್ದನು.

ರಾಜಭಟರು ಸಾಮಂತರು ಇಳಿದುಕೊಂಡಿದ್ದ ಸ್ಥಳಕ್ಕೆ ಬಂದು ಸುಮಂತನನ್ನು ಹುಡುಕಿಕೊಂಡು ಹೋದರು. ಆತನು ಅವರ ಕಣ್ಣಿಗೆ ಬಿದ್ದಕೂಡಲೇ "ನಿಮ್ಮನ್ನು ಮಹಾಸ್ವಾಮಿಯವರು ಕರೆದುಕೊಂಡು ಬರುವಂತೆ ಹೇಳಿದರು" ಎಂದರು. ಸುಮಂತನು ಅವರ ಸಂಗಡ ರಾಜಸಭೆಗೆ ಹೋದನು. ಸಿಂಹಾಸನದಲ್ಲಿ ಸರ್ವಜಿತನನ್ನು ನೋಡಿ ಸುಮಂತನು ಬೆರಗಾದನು. ತನ್ನಲ್ಲಿಗೆ ಅತಿಥಿಯಾಗಿ ಬಂದ ವ್ಯಕ್ತಿ ಈತನೇ ಎಂದು ಆತನು ಗ್ರಹಿಸಲಿಲ್ಲ.

"ನೀನು ಈ ವೇಷದಲ್ಲಿ ಬರಲು ಕಾರಣವೇನು?" ಎಂದು ಕೇಳಿದ ಸರ್ವಜಿತ.

"ಮಹಾಪ್ರಭೂ, ಕ್ಷಮಿಸಬೇಕು. ನಾನು ಸಾಮಂತನೇಹೊರತು ಸಂಪನ್ನನಲ್ಲ. ದೇಶಕ್ಕೆ ಸೇವೆಮಾಡಲು ಬಂದೆನೇಹೊರತು ನನ್ನ ಅಂತಸ್ಥನ್ನು ತೋರಿಸಿಕೊಳ್ಳಲು ಬರಲಿಲ್ಲ" ಎಂದನು.

ಆ ಕ್ಷಣವೇ ಸರ್ವಜಿತನು ಸುಮಂತನಿಗೆ ಆದ ಅನ್ಯಾಯವನ್ನು ಸರಿಪಡಿಸಿ, ಆತನಿಗೆ ಕೆಲವಾರು ಅಗ್ರಹಾರಗಳನ್ನು ಉಡುಗೊರೆಯಾಗಿ ಕೊಟ್ಟನು.

"ಅಂದು ನಿನ್ನ ಪರ್ಣಶಾಲೆಗೆ ಬಂದು ನಿನ್ನ ವಿಷಯವರಿತನಂತರ, ನಾನು ಧರ್ಮಮಾರ್ಗವನ್ನು ತ್ಯಜಿಸಿದೆನೆಂದು ಅರಿತೆನು. ಕೂಡಲೇ ಬಂದು ಅಸಮರ್ಥನಾದ ಹಿರಿಯ ಮಗನನ್ನು ಸಿಂಹಾಸನದಿಂದ ತೊಲಗಿಸಿದೆನು. ನನ್ನನಂತರ ನನ್ನ ಎರಡನೆಮಗನಿಗೆ ಪಟ್ಟಾಭಿಷೇಕವಾಗಬೇಕು. ಅವನಿಗೆ ಧರ್ಮಪರಿಪಾಲನೆಯ ಕ್ರಮವನ್ನು ಕುರಿತು ನೀನೇ ಬೋಧಿಸಬೇಕು" ಎಂದು ಸುಮಂತನನ್ನು ಸರ್ವಜಿತನು ಕೋರಿದನು. ಹಾಗೆಯೇ ಬೋಧಿಸುತ್ತಿದ್ದನು ಸುಮಂತ.



# ಇತರ ಚಂದ್ರರು

ನಮಗೆ ಆಕಾಶದಲ್ಲಿ ಕಾಣಿಸುವ ಚಂದ್ರ ಭೂಮಿಗೆ ಉಪಗ್ರಹ. ಅಂದರೆ, ಗ್ರಹಗಳಲ್ಲಿ ಒಂದಾದ ಭೂಮಿಯ ಸುತ್ತೂ ತಿರುಗುವ ಗೋಳ. ಭೂಮಿಗೆ ಚಂದ್ರನೊಂದೇ ಉಪಗ್ರಹ. ಆದರೆ ಇತರ ಗ್ರಹಗಳಿಗೆ, ಕೆಲವಕ್ಕೆ ಅನೇಕ ಚಂದ್ರರಿದ್ದಾರೆ. ಅವುಗಳನ್ನು ಕುರಿತು ಸ್ವಲ್ಪ ತಿಳಿದುಕೊಳ್ಳಿ.

* ಗುರುವಿಗೆ ಹನ್ನೊಂದು ಚಂದ್ರರಿದ್ದಾರೆ! ಅವುಗಳಲ್ಲೊಂದು ಬಲು ಚಿಕ್ಕದು. ಇದು ಗುರುಗ್ರಹದ ಎಲ್ಲಕ್ಕೂ ಸಮೀಪವಾಗಿದ್ದು ದಿನಕ್ಕೊಮ್ಮೆ ಸುತ್ತುತ್ತಾ ಇರುತ್ತದೆ. ಅದಕ್ಕಿಂತ ತುಸುದೂರದಲ್ಲಿ ನಾಲ್ಕು ಚಂದ್ರರಿದ್ದಾರೆ. ಇವೆಲ್ಲಾ ನಮ್ಮ ಚಂದ್ರನಿಗಿಂತ ದೊಡ್ಡವು. ಇವೂ ಬಹುವೇಗದಿಂದ ಗುರುವನ್ನು ಸುತ್ತುತ್ತವೆ. ಎಲ್ಲಕ್ಕೂ ಮೆಲ್ಲನೆ ಸುತ್ತುಬರುವ ಚಂದ್ರನಿಗೆ ಗುರುವನ್ನು ಒಮ್ಮೆ ಸುತ್ತಲಿಕ್ಕೆ ೧೭ ದಿನಗಳು ಹಿಡಿಯುತ್ತವೆ. ಮತ್ತೆ ದೂರದಲ್ಲಿರುವ ಆರು ಚಂದ್ರರು ಗುರುವನ್ನು ಒಮ್ಮೆ ಸುತ್ತಲು ಬಹಳಕಾಲ ಹಿಡಿಯುತ್ತದೆ. ಅವುಗಳಲ್ಲಿ ಎಲ್ಲಕ್ಕೂ ಮೆಲ್ಲ ತಿರುಗುವ ಚಂದ್ರ ಒಮ್ಮೆ ಗುರುಪ್ರದಕ್ಷಿಣೆ ಮಾಡಲು ೭೫೮ ದಿನಗಳು ಬೇಕು!

* ಶನಿಗ್ರಹಕ್ಕೆ ೯ ಚಂದ್ರರು. (ಹತ್ತನೆಯದೂ ಉಂಟೆನ್ನುವರು; ಆದರೆ ಅದು ಇನ್ನೂ ರುಜುವಾಗಿಲ್ಲ.) ಶನಿಯನ್ನು ಬಳಸುವ ಚಂದ್ರರಲ್ಲಿ ಎಲ್ಲಕ್ಕೂ ದೊಡ್ಡದು ಟೈಟನ್. ಅದು ನಮ್ಮ ಚಂದ್ರನಿಗಿಂತ ದೊಡ್ಡದು. ಇನ್ನೊಂದು ಚಂದ್ರದ ಹೆಸರು ಜೂಪಿಟರ್. ಇದು ದೀರ್ಘವೃತ್ತಾಕೃತಿಯಾಗಿರುವುದೆಂದು ಶಾಸ್ತ್ರಜ್ಞರ ಊಹೆ.

* ಶನಿಯಸುತ್ತೂ ತಿರುಗುವ ಚಂದ್ರರಲ್ಲದೆ ಮೂರು ವಲಯಗಳೂ ಇವೆ. ಇವುಗಳ ತುಂಬಾ ಕೋಟಾನುಕೋಟಿ ಸಂಖ್ಯೆಯಲ್ಲಿ ಬಹಳ ಸೂಕ್ಷ್ಮವಾದ ಚಂದ್ರರಿವೆಯೆಂದು ಶಾಸ್ತ್ರಜ್ಞರು ಊಹಿಸುತ್ತಾರೆ.

* ಯುರೇನಸ್ ಗ್ರಹದಸುತ್ತಲೂ ಕನಿಷ್ಟ ಪಕ್ಷ ಐದು ಚಂದ್ರರು ತಿರುಗುತ್ತಾರೆ. ಇವು ಈ ಗ್ರಹವನ್ನು ಒಮ್ಮೆ ಸುತ್ತಿಬರಲು ಕೆಲವುದಿನ ಹಿಡಿಯುತ್ತವೆ.

* ನೆಪ್ಚ್ಯೂನ್ ಗ್ರಹದ ಸುತ್ತಲೂ ಎರಡು ಚಂದ್ರರು ತಿರುಗುತ್ತಾರೆ.

* ಭೂಮಿಗೆ ಬಹಳ ದೂರದಲ್ಲಿರುವ ಗ್ರಹಗಳಸುತ್ತಲೂ ತಿರುಗುವ ಚಂದ್ರರನ್ನು ನೋಡುವುದು ಕಷ್ಟ. ಏಕೆಂದರೆ, ಭೂಮಿಯಿಂದ ಗುರುಗ್ರಹಕ್ಕೆ ೪೦ ಕೋಟಿ ಮೈಲು ದೂರವಿದೆ. ಶನಿಗ್ರಹಕ್ಕೆ ೮೦ ಕೋಟಿ ಮೈಲುದೂರ; ಯುರೇನಸ್ ೧೭೦ ಕೋಟಿ ಮೈಲು ದೂರ; ನೆಪ್ಚ್ಯೂನ್ ೨೭೦ ಕೋಟಿ ಮೈಲು ದೂರ!

# ಮಾಯಾ ಚಕ್ರ (ಹಿಂಬದಿಯ ಚಿತ್ರಕಥೆ-೪)

ರಾಣಿ ದೇವತೆಗೆ ಕೊಟ್ಟ ಆ ಮಂತ್ರದ ಉಂಗುರವನ್ನು ಕಣ್ಣಿಗೆ ಒತ್ತಿಕೊಂಡು ಬೆರಳಿಗೆ ಹಾಕಿಕೊಂಡಳು. ಬಳಿಕ ಹೊಸ ಉತ್ಸಾಹದಿಂದ ಮುಂದಕ್ಕೆ ಹೊರಟಳು.

ಏನಾದರೂ ಬೇಕಾದಾಗ ದೇವತೆ ಹೇಳಿಕೊಟ್ಟಂತೆ ಮಂತ್ರಪಠನೆಮಾಡಿ ಆ ಉಂಗುರವನ್ನು ಒಂದು ಸಣ್ಣ ಕಲ್ಲಿಗೆ ತಾಗಿಸಿದರೆ ಸರಿ, ಆ ಕಲ್ಲು ಬಂಗಾರದ ನಾಣ್ಯ ವಾಗುತಿತ್ತು. ಹಾಗೆ ಅವಳು ಕಲ್ಲುಗಳನ್ನು ನಾಣ್ಯಮಾಡುತ್ತ, ಆ ನಾಣ್ಯಗಳಿಂದ ತನಗೆ ಬೇಕಾದುದನ್ನು ಕೊಂಡುಕೊಳ್ಳುತ್ತ, ಕೆಂಪುಕೋಟೆಯನ್ನು ಕುರಿತು ವಿಚಾರಿಸುತ್ತ, ಮುಂದೆಮುಂದೆ ಹೋದಳು.

ಹಾಗೆಹೋಗಿ ಒಂದಾನೊಂದು ಊರಿಗೆ ಮುಟ್ಟಿದಳು. ಅಲ್ಲೊಂದು ಗುಡಿಸಲಿನಲ್ಲಿ ಮುದುಕಿಯೊಬ್ಬಳೇ ಕಳಿತಿದ್ದಳು. ಆ ಮುದುಕಿಯನ್ನು ಕುರಿತು—"ಅವ್ವಾ, ಕೆಂಪುವನದ ಕೆಂಪುಕೋಟೆ ಎಲ್ಲಿದೆ?" ಎಂದು ಕೇಳಿದಳು.

ಮುದುಕಿ "ಅಮ್ಮಾ, ಕೆಂಪುವನದ ಕೆಂಪುಕೋಟೆಯ ಹೆಸರು ಕೇಳಿದ್ದೇನೆ. ಎಲ್ಲಿದೆಯೋ ಗೊತ್ತಿಲ್ಲ. ಆದರೆ ಒಂದು ರೆಕ್ಕೆಯ ಕುದುರೆ ಆಗಾಗ ಮಧ್ಯರಾತ್ರಿಯಲ್ಲಿ ಆಕಾಶದಿಂದ ಇಳಿದು ಬಂದು ಅಲ್ಲಿಗೆ ಹೋಗುತ್ತೆ. ಅಲ್ಲಿಂದ ಕೆಂಪು, ರತ್ನ, ಮೊಹರಿಗಳನ್ನು ತೆಗೆದುಕೊಂಡು ಬರುತ್ತೆ. ಅದು ಬರುವಾಗಲೂ ಹೋಗುವಾಗಲೂ, ಅಕೋ ಅಲ್ಲಿರುವ ಆ ಉದ್ಯಾನದ ಆಲದಮರದಬುಡದಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತದೆ. ಅದು ಬರುವವರೆಗೆ ನೀನು ಕಾದಿದ್ದರೆ ಅದರೊಂದಿಗೇ ನಿನಗೆ ಹೋಗಬಹುದು. ಇದರ ಹೊರತು ಬೇರೆ ದಾರಿ ಇಲ್ಲಮ್ಮ," ಎಂದಳು.

"ಹಾಗೆಯೇ ಕಾದುಕೊಂಡು ಇರುತ್ತೇನೆ ಅಜ್ಜೀ" ಎಂದು ರಾಣಿ ದಿನ ಎಣಿಸುತ್ತಾ ಅಲ್ಲಿದ್ದಳು. ರಾತ್ರಿಯಲ್ಲಿ ಆ ಆಲದಮರದ ಬುಡದಲ್ಲೇ ಮಲಗುತಿದ್ದಳು. ಹೀಗೆಯೇ ಅನೇಕ ದಿನ ಕಳೆದುವು. ಒಂದು ದಿನ ಅರ್ಧರಾತ್ರಿಯಲ್ಲಿ ಆಕಾಶದಲ್ಲೊಂದು ಮಿಂಚು ಮಿಂಚಿತು. ಕೂಡಲೇ ಸುಂದರವಾದ ರೆಕ್ಕೆಯ ಕುದುರೆ ಅವಳ ಬಳಿಗೇ ಬಂದಿಳಿಯಿತು.

ರಾಣಿ ಬಹು ಸಂಭ್ರಮದಿಂದ ಅದಕ್ಕೆವಂದಿಸಿ ತನ್ನ ದುಃಖದ ಕಥೆಯನ್ನೆಲ್ಲಾ ಹೇಳಿ, "ಓ ಅಶ್ವರಾಜಾ, ನಿನ್ನ ಮಹಿಮೆ, ನಿನ್ನ ಉಪಕಾರಬುದ್ಧಿ ತುಂಬಾ ಕೇಳಿದ್ದೇನೆ. ನನ್ನನ್ನು ನಿನ್ನೊಂದಿಗೆ ಕೆಂಪುವನದ ಕೆಂಪುಕೋಟೆಗೆ ಕರೆದುಕೊಂಡು ಹೋಗಿ ಪುಣ್ಯಕಟ್ಟಿಕೊ" ಎಂದು ಬೇಡಿಕೊಂಡಳು. ಆಗ ಆ ರೆಕ್ಕೆಯಕುದುರೆ...

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1955 ಏಪ್ರಿಲ್ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಫಿಬ್ರವರಿ 7 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.

ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು – 26.

---

### ಈ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ : ಕಲಿಯೋಣಾಂದ್ರೆ ಕಲಿಸೋರಾರಿಲ್ಲ

ಎರಡನೇ ಫೋಟೋ: ಅಲೆಯೋಣಾಂದ್ರೆ ಬಿಚ್ಚೋರಾರಿಲ್ಲ

ಕಳಿಸಿದವರು : ಉಮೇಶ, ದಂಡಾವತಿ ಮಠ, C/o ಕಾಗವಾಡಗಿರಣಿ,
ಬೈಲಹೊಂಗಲ ತಾಲೂಕು, ಬೆಳಗಾವಿ.

ಬಹುಮತಿ ರೂ. 10/–ನ್ನು ಈ ತಿಂಗಳಿನಲ್ಲಿ ಕಳುಹಿಸಲ್ಪಡುತ್ತದೆ.



# ವಾರ್ತೆಗಳು-ವಿಶೇಷಗಳು

**ಪಾ**ಕಿಸ್ತಾನ್ ಸರಿಹದ್ದು ರಾಷ್ಟ್ರ ಗವರ್ನರ್ ಖಾನ್ ಕುರ್ಬನ್ ಆಲೀಯವರು ಪೇಶಾವರ ವಿಶ್ವವಿದ್ಯಾಲಯಕ್ಕೆ ೧೦೦೦ ರೂ. ಗಳನ್ನು ಮಂಜೂರು ಮಾಡಿದ್ದಾರೆ. ಇದರಿಂದ ವ್ಯಾಪಾರಸ್ಥನಿಲ್ಲದ ಅಂಗಡಿ ತೆರೆಯಲಾಗುತ್ತದೆ. ಅದರಲ್ಲಿಯ ವಿಧವಿಧವಾದ ವ್ಯಾಪಾರ ವಸ್ತುಗಳಿಗೆಲ್ಲಾ ಚೀಟಿಕಟ್ಟಿಡುತ್ತಾರೆ. ಗಿರಾಕಿಗಳು ಚೀಟಿಯಲ್ಲಿರುವ ಬೆಲೆಯನ್ನು ಅಲ್ಲಿಟ್ಟು ವಸ್ತುವನ್ನು ತೆಗೆದುಕೊಳ್ಳಬೇಕಾದ್ದು.

* * *

**ಟಿ**ಬೆಟ್ಟು ದೇಶದ ಮುಖ್ಯಪಟ್ಟಣವಾದ ಲಾಷಾದಿಂದ ಚೀನಾದೇಶಕ್ಕೆ ರಸ್ತೆಯ ನಿರ್ಮಾಣವಾಗುತ್ತಿದೆ.

* * *

**ಭಾ**ರತಸರಕಾರದ ಆಹ್ವಾನದಿಂದ ಯುಗೋಸ್ಲೋವಿಯಾ ಪ್ರೆಸಿಡೆಂಟ್ ಮಾರ್ಷಲ್ ಟಿಟೋ ಭಾರತಕ್ಕೆ ಬಂದರು. ಕಳೆದ ಡಿಸೆಂಬರ್ ೧೬ ರಂದು ಬೊಂಬಾಯಿಯಲ್ಲಿ ಅವರಿಗೆ ಪ್ರಚಂಡಸ್ವಾಗತ ಜರುಗಿತು. ಅವರು ಢಿಲ್ಲಿಗೆ ಹೋಗಿ ಪ್ರಧಾನಿ ಪಂಡಿತ ನೆಹರು, ರಾಷ್ಟ್ರಪತಿ ರಾಜೇಂದ್ರಪ್ರಸಾದ್ ಇವರುಗಳ ಭೇಟಿಮಾಡಿದರು.

* * *

**ಈ**ಗ ಇರುವ ಗ್ರಹಕೂಟಗಳಲ್ಲಿ ಇನ್ನೊಂದು ಹೊಸಗ್ರಹವು ಇರುವುದೆಂದು ಜಾರ್ಜ್ ಏಬೆಲ್ ಎಂಬ ಅಮೆರಿಕಾ ಖಗೋಳ ಶಾಸ್ತ್ರಜ್ಞನು ಕಂಡು ಹಿಡಿದಿದ್ದಾನೆ.

* * *

**ಆಂ**ಧ್ರ ದೇಶದಲ್ಲಿರುವ ಮಲೆಜಾತಿಯವರಲ್ಲಿ, ಬಿಲ್ಲುವಿದ್ಯೆಯ ಸ್ಪರ್ಧೆಯನ್ನಿಟ್ಟು ಬಹುಮಾನ ಕೊಡಲು ೧೦೫೦ ರೂಪಾಯಿಯನ್ನು ಆಂಧ್ರ ಸರಕಾರವು ಮಂಜೂರು ಮಾಡಿದೆ.

* * *

**ಅ**ಖಿಲಭಾರತ ಕಾಂಗ್ರೆಸು ಸಮಾವೇಶವು ಮದರಾಸಿಗೆ ಸಮೀಪದಲ್ಲಿರುವ ಆವಡಿಯಲ್ಲಿ ಕಳೆದ ತಿಂಗಳು ಜರುಗಿತು.



**ಮ**ಧುರೆಯಲ್ಲಿಯ ಮೀನಾಕ್ಷಿಗಿರಣಿಯಲ್ಲಿ ಗುರುಸ್ವಾಮಿಪಿಳ್ಳೆಯೆಂಬ ಕುರುಡ ಕೆಲಸಗಾರನಿದ್ದಾನೆ. ಇವನು ಕಣ್ಣಿದ್ದವರುಕೂಡ ಮಾಡಲಾರದ ಲೆಕ್ಕವನ್ನು ಕ್ಷಣಾರ್ಧದಲ್ಲಿ ಮಾಡಿಬಿಡಲು ಸಮರ್ಥನಂತೆ.

* * *

**ಗು**ಜರಾತದ ಸೇವಾದಳದವರು ನೌಕಾಪ್ರವಾಸವನ್ನು ಕೈಕೊಂಡು ಇದುವರೆಗೆ ಯಾರಿಗೂ ಕಾಣಿಸದೆ ಇದ್ದ ಒಂದು ಜಲಪಾತವನ್ನು ಕಂಡುಹಿಡಿದಿದ್ದಾರಂತೆ.

* * *

**ದ**ಕ್ಷಿಣ ಕನ್ನಡ ಜಿಲ್ಲೆಯ ಕಾರವಾರವನ್ನು, ಮುಖ್ಯ ಬಂದರವನ್ನಾಗಿಸಿ ಅಭಿವೃದ್ಧಿಗೊಳಿಸಲು ತಕ್ಕ ಯೋಜನೆಗಳು ಆಗುತ್ತಿವೆ.

* * *

**ಬೆಂ**ಗಳೂರು ಸೇಲಂಗಳ ನಡುವೆ ರೈಲ್ವೇ ಹಾಕಬೇಕೆಂದು ಪರಿಶೀಲನಾ ಕಾರ್ಯ ನಡೆಯುತ್ತಿದೆ. ಮತ್ತು ಮಂಗಳೂರು—ಹಾಸನ ರೈಲ್ವೇ ಮಾರ್ಗ ರಚನೆಗೂ ಏರ್ಪಾಡು ಆಗುತ್ತಿದೆ.

* * *

**ಕ**ಳೆದ ವರುಷದ ಅಂತ್ಯದಲ್ಲಿ ಡಿಲ್ಲಿಯಲ್ಲಿ ನಡೆದ ಯುವಜನೋತ್ಸವದಲ್ಲಿ ಕರ್ನಾಟಕದವರಾದ ಶ್ರೀ ಎ. ಎಲ್. ಹಿರೇಮಠ ಎಂಬವರಿಗೆ ನೃತ್ಯದಲ್ಲಿಯೂ, ಹುಬ್ಬಳ್ಳಿಯ ಕುಮಾರ ಬಿ. ಡಿ. ಪಾಠಕ ಇವರಿಗೆ ವೀಣಾವಾದನದಲ್ಲಿಯೂ ಪ್ರಶಂಸಾಪತ್ರಿಕೆ ಸಿಕ್ಕಿದೆ.

* * *

**ಗೌ**ರೀಶಂಕರ ಪರ್ವತದ ಎತ್ತರವು ಹೆಚ್ಚಾಗಿರುವುದೆಂದು ತಜ್ಞರು ಪ್ರಕಟಮಾಡಿದ್ದಾರೆ. ಹಿಮದ ಸಾಂದ್ರತೆ ವಿರಳತೆಗಳಿಂದ ಅದು ವ್ಯತ್ಯಾಸವಾಗುತ್ತಿರುತ್ತದೆ.

* * *

**ಉ**ಪಾಧ್ಯಾಯರ ಸಹಾಯವಿಲ್ಲದೆ ಕಾರ್ಡುಗಳ ಸಹಾಯದಿಂದಲೇ ಅಕ್ಷರಗಳನ್ನು ಕಲಿಯಬಲ್ಲಂತಹ ಒಂದು ಪದ್ಧತಿಯನ್ನು ಬೊಂಬಾಯಿಯ ಸಮಾಜಶಿಕ್ಷಣ ಸಮಿತಿಯವರು ಶೋಧಿಸಿದ್ದಾರೆ.

* * *

**ಹಿಂ**ದುಳಿದ ವರ್ಗಗಳ ವಿದ್ಯಾರ್ಥಿಗಳಿಗಾಗಿ ಧರ್ಮಾರ್ಥ ವಸತಿ ಮತ್ತು ಊಟದ ಸೌಕರ್ಯಗಳನ್ನೊಳಗೊಂಡ ಮಂದಿರವನ್ನು ಹೈದ್ರಾಬಾದು ಸರಕಾರದವರು ಅಲ್ಲಿ ತೆರೆದಿಡಲು ಯೋಜಿಸಿದ್ದಾರೆ.

* * *

**ಭಾ**ರತದಿಂದ ಪಾಕೀಸ್ಥಾನಕ್ಕೆ ಹೋದವರ ಸ್ಥಳವನ್ನು ಅಗೆದು ನೋಡಿದರೆ ಆಭರಣಗಳೂ ನಾಣ್ಯಗಳೂ ಸಿಗುತ್ತಿವೆಯಂತೆ.



# ಚಿತ್ರ ಕಥೆ



ಒಂದುದಿನ ವಾಸು, ಗೋಪಿಯ ಮನೆಗೆ ಹೋದ. ಅಲ್ಲಿ ಬೆಂಚಿಯಮೇಲೆ ಮೂರು ದೊಡ್ಡ ಕುಂಬಳಕಾಯಿಗಳನ್ನ ಇಟ್ಟಿದ್ದರು. "ಮಾಡುತ್ತೇನೆ ಈಗ ಒಂದು ತಮಾಷೆ" ಎಂದು ವಾಸು ಜೇಬಿನಿಂದ ಚೂರಿ ತೆಗೆದು ಅವುಗಳಿಗೆ ಕಣ್ಣೂ ಬಾಯಿಯೂ ಕೊಯ್ದನು. ಗೋಪಿ ಬಣ್ಣ ಬಳಿದ.




ಅವುಗಳನ್ನು ಹೆಚ್ಚಲು ಅಡಿಗೆಯವಳು ಬರುವ ಹೊತ್ತು ನೋಡಿ ತುಂಟರಿಬ್ಬರೂ ಕುಂಬಳಕಾಯಿಗಳ ಹಿಂದೆ ಅಡಗಿಕೊಂಡರು. 'ಟೈಗರ್' ನಾಯಿಕೂಡಾ ಒಂದು ಕುಂಬಳಕಾಯಿಯ ಹಿಂದೆ ಸೇರಿತು. ಅಡಿಗೆಯವಳು ಬರುತ್ತಲೇ ವಾಸು ಗೋಪಿಯರು 'ಫರ್ರ್'ಂದರು. ಟೈಗರ್ ಗುರ್ರೆಂದಿತು. ಅವಳು ಪಾಪ,......!

Printed by B. NAGI REDDI at the B. N. K. Press Ltd., Madras 26, and Published by him for Chandamama Publications, Madras 26. Controlling Editor: SRI 'CHAKRAPANI'

Photo by B. Ranganathan



ಬಹುಮಾನ
ಪಡೆದ ಶೀರ್ಷಿಕೆ

ಅಲೆಯೋಣಾಂದ್ರೆ ಬಿಚ್ಚೋರಾರಿಲ್ಲ

ಕಳಿಸಿದವರು:
ಉಮೇಶ, ದಂಡಾವತಿ ಮಠ

